ಪ್ರಥಮ ಮುದ್ರಣ : ೧೯೬೮
೫೦೦೦ ಪ್ರತಿಗಳು

ಸಂಪಾದಕ ಮಂಡಲ

ಪ್ರಿ. ರಾ. ಯ. ಧಾರವಾಡಕರ
(ಪ್ರಧಾನ ಸಂಪಾದಕ)

ಶ್ರೀ ಬಿಂದುಮಾಧವ ಬುರ್ಲಿ

ಶ್ರೀ ಎಸ್. ಎಸ್. ಒಡೆಯರ

ಪ್ರೊ. ಜಿ. ಡಿ. ನಾಡಕರ್ಣಿ

ಶ್ರೀ ಎಂ. ಶಂಕರ

ಶ್ರೀ ಗೋವಿಂದಮೂರ್ತಿ ದೇಸಾಯಿ

ಪ್ರಕಾಶಕರು
ರಾ. ಶ್ರೀ. ಹುಕ್ಕೇರಿಕರ
ಅಧ್ಯಕ್ಷ, ಗಾಂಧಿಸ್ಮಾರಕ ನಿಧಿ, ಕರ್ನಾಟಕ ಶಾಖೆ

ಮುದ್ರಕರು
ಎಸ್. ಎಫ್. ಮಿಂಡಗುದ್ದಿ
ರವೀಂದ್ರ ಮುದ್ರಣಾಲಯ, ಧಾರವಾಡ

# ಮೊದಲ ಮಾತು

ಗಾಂಧೀಜಿ ಕುಳಿತಲ್ಲಿ ದೇವಮಂದಿರವಾಯಿತು; ನಡೆದಲ್ಲಿ ಪವಿತ್ರ ಭೂಮಿಯಾಯಿತು—ಎಂದು ಪಂಡಿತ ನೆಹರು ಅವರು ಹೇಳಿದರು. ಗಾಂಧೀಜಿಯ ಜೀವನ ಕಾಲದಲ್ಲಿ ಅವರ ಮಾರ್ಗ ದರ್ಶನದಲ್ಲಿ ಕೆಲಸವನ್ನು ಮಾಡುವ ಸೌಭಾಗ್ಯವು ಅನೇಕರಿಗೆ ಲಭಿಸಿತು. ಅವರ ವ್ಯಕ್ತಿತ್ವವು ತೋರಿದ ದಾರಿಯನ್ನು ಇಂದು ನಾವು ಅವರ ಲೇಖನಗಳ ಮೂಲಕ ಕಂಡುಕೊಳ್ಳಬೇಕಾಗಿದೆ.

ಗಾಂಧೀಜಿಯವರ ವಿಚಾರಗಳನ್ನು ಈ ರೀತಿ ಜನತೆಯ ಮುಂದಿಡುವ ದೃಷ್ಟಿಯಿಂದ ಗಾಂಧಿಸ್ಮಾರಕ ನಿಧಿಯವರು ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ ಗಾಂಧಿಸಾಹಿತ್ಯವನ್ನು ಭಾಷಾಂತ ರಿಸಿ ಪೂರೈಸುತ್ತಿದ್ದಾರೆ. ಕನ್ನಡದಲ್ಲಿ ಈಗಾಗಲೇ ಇಂಥ ಅನೇಕ ಪ್ರೌಢ ಪ್ರಕಟನೆಗಳಾಗಿವೆ.

ಹೆಚ್ಚು ಸರಳವಾದ ಭಾಷೆಯಲ್ಲಿ ಗಾಂಧಿಸಾಹಿತ್ಯವನ್ನು ಒದಗಿಸುವ ದೃಷ್ಟಿಯಿಂದ ಹೆಚ್ಚು ಸಂಗ್ರಹಾನುಕೂಲವಾಗಿರು ವಂತೆಯೂ ಇನ್ನೂ ಎರಡು ಆಕಾರಗಳಲ್ಲಿ ಗಾಂಧಿಸಾಹಿತ್ಯವನ್ನು ಪ್ರಕಟಿಸುವುದೆಂದು ನಿರ್ಧರಿಸಿತು. ಈ ಗ್ರಂಥಗಳ ಮುಖ್ಯ ಉದ್ದೇಶ ಗಾಂಧಿ ತತ್ತ್ವಜ್ಞಾನ ಇಲ್ಲವೆ ಸಾಹಿತ್ಯದ ಮೌಲ್ಯ ಮಾಪನವಾಗಿರದೆ, ಭಿನ್ನಭಿನ್ನ ವಿಷಯಗಳ ಬಗೆಗೆ ಗಾಂಧೀಜಿ ಯವರು ಹೇಳಿದ ಮಾತುಗಳನ್ನು ತದ್ವತ್ತಾಗಿ ಭಾಷಾಂತರಿಸಿ

ಜೊತೆಗೆ ಸಂಬಂಧ ಬಂದ ಹಿರಿಯ ವ್ಯಕ್ತಿಗಳ ಸಂಪರ್ಕ ಮತ್ತು ಕಾರ್ಯಗಳ ವಿವರಣೆಯನ್ನು ಕೊಡಬೇಕೆಂದೂ ಉದ್ದೇಶಿಸಲಾಗಿದೆ.

ಈ ಪ್ರಕಟನೆಗಳಲ್ಲಿಯ ಮೊದಲಿನ ಮಾಲಿಕೆಯಲ್ಲಿ ಪುಟ್ಟ ಸರಳವಾದ ಪ್ರತಿಪಾದನೆಯ ಕಡೆಗೆ ಲಕ್ಷ್ಯವನ್ನು ಪೂರ್ತಿ ಇಟ್ಟರೆ, ಜೇಬಿನಾವೃತ್ತಿಯಲ್ಲಿ ಆ ವಿಷಯಗಳ ಬಗೆಗೆ ಗಾಂಧೀಜಿ ವಿಚಾರ ಸಾರವು ನೆನಪಿನಲ್ಲಿ ಉಳಿಯುವಂತೆ ಸೂತ್ರಬದ್ಧವಾಗಿ [illegible]ಗಳನ್ನು ಕೊಡಲಾಗಿದೆ.

ಮೊದಲಿನ ಮಾಲಿಕೆಯಲ್ಲಿ ಈಗಾಗಲೇ "ಮಹಿಳೆಯರು" "ಒಳ್ಳೆಯ ಜೀವನ" "ಅಸ್ಪೃಶ್ಯತೆ" "ಸತ್ಯ" "ಸರ್ವೋದಯ" "ವಿದ್ಯಾರ್ಥಿಗಳು" "ಖಾದಿ-ಗ್ರಾಮೋದ್ಯೋಗ" "ನನ್ನ ಬಾಲ್ಯದ ನೆನಪುಗಳು" "ಪ್ರಾರ್ಥನೆ" "ನನ್ನ ಕನಸಿನ ಭಾರತ" "ಹಿಂದೂ ಧರ್ಮ" "ಗಾಂಧಿ ಮತ್ತು ಠಾಕೂರ" ಎಂಬ ೧೧ ಪುಸ್ತಕಗಳು ಪ್ರಕಟವಾಗಿವೆ.

ಹಿಂದಿನ ವರುಷದ ಅವಧಿಯಲ್ಲಿ ಜನಪ್ರಿಯ ಮಾಲಿಕೆಯಲ್ಲಿ ೧೩ ಪುಸ್ತಕಗಳನ್ನೂ ಜೇಬಿನಾವೃತ್ತಿಯಲ್ಲಿ ೧೨ ಪುಸ್ತಕಗಳನ್ನೂ ಸುಂದರವಾಗಿಯೂ ಮತ್ತು ಅಚ್ಚುಕಟ್ಟಾಗಿಯೂ ಸಂಪಾದಿಸಿ ಪ್ರಕಟಗೊಳಿಸಿದ ಪ್ರಿ. ರಾ. ಯ. ಧಾರವಾಡಕರ ಅವರ ಪರಿಶ್ರಮವು ನಿಜವಾಗಿಯೂ ಅಭಿನಂದನೀಯವಾಗಿದೆ. ಅವರ ಉತ್ಸಾಹ, ಕಲ್ಪಕ ಶಕ್ತಿ ಮತ್ತು ನಿಷ್ಠೆ ಅಭಿನಂದನಾರ್ಹವಾಗಿವೆ.

ಶಿಕ್ಷಣ ಮತ್ತು ಇತರ ವಿಧಾಯಕ ಕಾರ್ಯಕ್ಷೇತ್ರಗಳಲ್ಲಿ ಇಂದು ಗಾಂಧಿ ವಿಚಾರದ ತಿಳಿವಳಿಕೆ ಮತ್ತು ಅನುಷ್ಠಾನದ

ಅವಶ್ಯಕತೆ ಎಷ್ಟಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇಂಥ ವಿಚಾರಗಳಲ್ಲಿ ಆಸಕ್ತಿಯುಳ್ಳ ಶಿಕ್ಷಣ ಸಂಸ್ಥೆಗಳು, ವಯಸ್ಕರ ಶಿಕ್ಷಣ ಸಂಸ್ಥೆಗಳು ಹಳ್ಳಿ ಮತ್ತು ಪಟ್ಟಣಗಳಲ್ಲಿಯ ವಾಚನಾಲಯಗಳು ಮತ್ತು ವಿಧಾಯಕ ಕಾರ್ಯಕರ್ತರು ಈ ಪ್ರಕಟನೆಗಳನ್ನು ಸ್ವಾಗತಿಸುವುದಾಗಿ ನಂಬಿದ್ದೇನೆ.

ರಾ. ಶ್ರೀ. ಹುಕ್ಕೇರಿಕರ,
ಅಧ್ಯಕ್ಷ,
ಗಾಂಧಿ ಸ್ಮಾರಕ ನಿಧಿ, ಕರ್ನಾಟಕ ಶಾಖೆ

ವಿದ್ಯಾಗಿರಿ, ಧಾರವಾಡ
೧–೧೨–೧೯೬೦

# ಸಂಪಾದಕರ ಮಾತು

ಕರ್ನಾಟ ದೇಶದ ಜನಾ
ಕನ್ನಡಿಸಿತು ಮನಾ
ಹಾಡಿತು ಕವಿಗಣಾ—

ಗಾಂಧೀಜಿಯವರ ಗೊಮ್ಮಟೋನ್ನತ ವ್ಯಕ್ತಿತ್ವವು ಸಮಗ್ರ ಸಮಾಜವನ್ನೇ ಆಕರ್ಷಿಸಿತು. ರಾಜಕಾರಣಿಗಳು, ವಕೀಲರು, ಕವಿಗಳು, ಡಾಕ್ಟರರು, ವಿದ್ಯಾರ್ಥಿಗಳು, ಶ್ರಮಜೀವಿಗಳು, ಚಿಕ್ಕಮಕ್ಕಳು—ಇಡೀ ಭರತ ಖಂಡವೇ ಅವರ ಕರೆಗೆ ಓಗೊಟ್ಟಿತು. ಗಾಂಧೀಜಿಯವರು ಬಹು ದೊಡ್ಡ ಬಾಳನ್ನು ಬಾಳಿದರು. ತಮ್ಮ ಮಹಾ ಮರಣದಲ್ಲಿಯೂ ದೊಡ್ಡಿತೆಯನ್ನು ತೋರಿದರು. ಅವರ ಬಹುಮುಖ ಜೀವನದಿಂದ ಸ್ಫೂರ್ತಿ ಪಡೆದ ಕನ್ನಡ ಕವಿವೃಂದ ಅವರಿಗೆ ಕೃತಜ್ಞತೆಯ ಮಾಲೆಯನ್ನು ಸಮರ್ಪಿಸಿತು.

—ಪ್ರಸ್ತುತ ಸಂಗ್ರಹದಲ್ಲಿ ಗಾಂಧೀಜಿಯವರನ್ನು ಕುರಿತು ಳಳ ಜನ ಖ್ಯಾತ ಕನ್ನಡಕವಿಗಳು ಬರೆದ ಕವಿತೆಗಳನ್ನು ಸಂಕಲಿಸಿ ಕೊಡಲಾಗಿದೆ. ಭಾವ ಮತ್ತು ನಿರೂಪಣೆಯಲ್ಲಿಯ ವೈವಿಧ್ಯಗಳನ್ನು ವಾಚಕರು ಸುಲಭವಾಗಿ ಗ್ರಹಿಸಬಹುದು.

—ಸಂಕಲನದಲ್ಲಿಯ ಕವನಗಳನ್ನು ಬಹುಮಟ್ಟಿಗೆ ಕವಿಗಳ ಅಕ್ಷರಾನುಕ್ರಮಣಿಕೆಯಲ್ಲಿ ಕೊಡಲಾಗಿದೆ. "ಗಾಂಧೀ-ಸ್ತವನ" ಮುದ್ರಿಸಲು ಅನುಮತಿಯಿತ್ತ ಮೈಸೂರಿನ ಕಾವ್ಯಾಲಯದ ಪ್ರಕಾಶಕರಿಗೆ ಕೃತಜ್ಞತೆಗಳು.

—ಸಂಕಲನದಲ್ಲಿ ತಮ್ಮೆಲ್ಲ ಕವನಗಳನ್ನು ಪ್ರಕಟಿಸಲು ಅನುಮತಿಯಿತ್ತ ಕವಿಗಳೆಲ್ಲರಿಗೂ ಸಂಪಾದಕ ಮಂಡಲವು ತುಂಬಾ ಋಣಿಯಾಗಿದೆ. ಸಂಕಲನ ಕಾರ್ಯದಲ್ಲಿ ಸಹಾಯ ಮಾಡಿದ ಪ್ರೊ. ಜಿ. ಬಿ. ನಾಡಕರ್ಣಿಯವರಿಗೆ ಕೃತಜ್ಞತೆಗಳು.

—ನಮ್ಮ ಕಾರ್ಯದಲ್ಲಿ ಉತ್ತೇಜನವಿತ್ತ ಶ್ರೀ ಆರ್. ಎಸ್. ಹುಕ್ಕೇರಿಕರಜಿಯವರಿಗೆ ಅನಂತ ವಂದನೆಗಳು.

ವಿದ್ಯಾಗಿರಿ, ಧಾರವಾಡ<br>೨-೧೨-೧೯೬೦

ರಾ. ಯ. ಧಾರವಾಡಕರ<br>ಪ್ರಧಾನ ಸಂಪಾದಕ

ಗಾಂಧಿ ಗ್ರಂಥಮಾಲೆ

# ಗಾಂಧಿ ಸ್ಮಾರಕ ನಿಧಿ, ಧಾರವಾಡ

## (೧೯೫೯-೬೦ ರಲ್ಲಿ ಪ್ರಕಟವಾದ ಪುಸ್ತಕಗಳು

೧. ಮಹಿಳೆಯರು.

೨. ಆಶ್ರಮ ಜೀವನ

೩. ಅಸ್ಪೃಶ್ಯತೆ

೪. ಸತ್ಯ

೫. ಸರ್ವೋದಯ

೬. ವಿದ್ಯಾರ್ಥಿಗಳು

೭. ಖಾದಿ ಗ್ರಾಮೋದ್ಯೋಗ

೮. ನನ್ನ ಬಾಲ್ಯದ ನೆನಪುಗಳು

೯. ಪ್ರಾರ್ಥನೆ

೧೦. ಸ್ವಾತಂತ್ರ್ಯ

೧೧. ನನ್ನ ಕನಸಿನ ಭಾರತ

೧೨. ಹಿಂದೂ ಧರ್ಮ

೧೩. ಗಾಂಧಿ ಮತ್ತು ಠಾಕೂರ

೧೪.
೧೫. } ಬಾಪೂ ಕಾವ್ಯಾಂಜಲಿ

ವಿವರಗಳಿಗಾಗಿ ಬರೆಯಿರಿ :

**ರಾ. ಯ. ಧಾರವಾಡಕರ,**
ಪ್ರಧಾನ ಸಂಪಾದಕ,
ಧಾರವಾಡ

# ನಾಡನೇಸರ ಬಾಪು

ಕಾಳಶಕ್ತಿಯ ಕ್ರೂರ ದಾಳಿಗಾಹುತಿಯಾಗಿ
ನಾಡನೇಸರ ಬಾಪು ಮುಳುಗುತಿರಲು
ಹಾಹಾಕಾರ್ ಸುರಿಯಿತಯ್ ಬುವಿಯು ಬಾಳೆಂಬುವುದು
ಎದೆಯಾಳದಳಲು ಹೊರಹೊಮ್ಮುತಿರಲು. ೧

ಸಿಡಿಗುಂಡಿಗೊಡೆದ ಕನ್ನಡಿಯಾದರೇನಂತೆ ?
ನಾಡನೇಸರನಾತ್ಮವಮರವಹುದು.
ನಕ್ಷತ್ರಗಳ ಪುಂಜವಾಗುತಲಿ ರಂಜಿಸುತ
ಬಾಳಿನೊಸಗೆಯ ಬಯಸಿ ಬೆಳಗುತಿಹುದು. ೨

ನಾಡನೇಸರನಿಂದ ಕದ್ದುಕೊಂಡಿಹ ಬೆಳಕ
ಬಂಡವಾಳದ ಥಳುಕಿನಾಟವೇನು !
ಬಿಳಿಯ ಟೋಪಿಯ ಬಂಟ—ಭಂಡ ಬಾಳಿನ ನಂಟ—
ಕಳ್ಳ ತಿಂಗಳನ ಚೆಲ್ಲಾಟವೇನು ! ೩

ಕತ್ತಲೆಯು ಗುಡಿಗಟ್ಟಿ ಬೆಳಕನೆಲ್ಲವ ಮೆಟ್ಟಿ
ದೈತ್ಯಶಕ್ತಿಯ ಬೆನ್ನುತಟ್ಟಲೇನು ?
ಮನುಜಮನ ಮುತ್ತಿರುವ ಮಂಕುತನದಾವರಣ
ಹರಿದೊಗೆವ ಹೊಸ ಬೆಳಕು ಹುಟ್ಟದೇನು ? ೪

ಏನಾದರೇನಂತೆ ? ಎದೆಗೆಡುವುದೇಕಂತೆ ?
ಕತ್ತಲೆಗೆ ಬಹುದು ಕೊನೆಗಾಲ ತಾನು !
ಹೊಸದಿನದ ಹೊಸಬಾಳಿನಾಸೆಯನು ತಾಳುತಲಿ,
ಹುರುಪಿನಿಂ ಬರದಿರನು ಕ್ರಾಂತಿಭಾನು ! ೫

—ಎಂ. ಅಕಬರ ಅಲಿ.

# ಏನೆಂಥ ಕಣ್ಣು !!

ಏನೆಂಥ ಕಣ್ಣು !
ಬರಿಗಣ್ಣಾ ಬಂಟರಿಗಲ್ಲ
ಬರುಗಣ್ಣಾ ತುಂಟರಿಗಲ್ಲ
' ಕಂಡವರಿಗಲ್ಲ
ಕಂಡವರಿಗಷ್ಟೆ '
—ಈ ಕಣ್ಣು !
ತಿಳಿಗಣ್ಣು !
ಒಳಗಣ್ಣು !!
ಏನೆಂಥ ಕಣ್ಣು !!

ಝೊಮ್ಮೆಸುತ ವಿಶ್ವವೀಣಾಗಾನ
ಮಂದ್ರ—ಮಂದ್ರ,
ಇರುಳ್ಗಡಲ ಒಡಲಿಂದ ಮೂಡಿ
ಬಂದಿತು ಅಣ್ಣ, ಈ ಕಣ್ಣು-ಚಂದ್ರ :
ತಾನಾಗಿ ರಾಮ-ಚಂದ್ರ !
ಅಲ್ಲಲ್ಲ, ರಾಮಚಂದ್ರ !
ಯಾರದೋ ಶಾಪಕ್ಕೆ
ಯಾವುದೋ ಪಾಪಕ್ಕೆ

ಎಂಥದೋ ತಾಪಕ್ಕೆ
ಕಲ್ಲಾಗಿ ಬಿದ್ದು
ನವೆ-ನವೆಯುತಿದ್ದಾ ಹೆಣ್ಣು
ಈ ಇವನ,
ಪತಿತೋದ್ಧಾರಕ ಮಹಾತ್ಮನ
ಮೆಲ್ಲಡಿಯ, ಮರುಜೀವಣಿಯ
ಸೋಂಕಿಂಗೆ ಚೇತರಿಸಿ,
ಮೆಲ್ಲನೆಯೆ ಮೇಲೆದ್ದಳೈ
ತೆರೆದು ಕಣ್ಣು;—
ಮಣ್ಣ ಹೊನ್ನಾಗಿಸುತ !
ಕೊರಡ ಕೊನರಾಗಿಸುತ !
ಬರಡ ಹಯನಾಗಿಸುತ !

* * * *

ಏನೆಂಥ ಕಣ್ಣು !
ನೆಲ-ಮುಗಿಲು ಎವೆಯಾಗಿ
ತೆರೆದ ಅದ್ಭುತ ಕಣ್ಣು !!
ಭಾರತದ ಮಾನಸದಿ ಮಿಂದು
ಮೆರೆಯುಲು ಬಂದ ಹಂಸ ತಾನು,
ನಡೆ-ನುಡಿಯ ಬೆಳ್ಳಿಯನು ಬೆಳಬೆಳಗಿಸಿ
ಮನದ ಬಂಗಾರವನು ತೊಳತೊಳಗಿಸಿ
ಗಾಳಿ—ತೇರನ್ನೇರಿ
ಬೆಳಕು—ಲೋಕವ ಸಾರಿ
ನನ್ನಿ-ನೇಹದ ರೆಕ್ಕೆ ಜಗದಗಲ ಹರಹುತ್ತೆ

# ಭಾರತದ ತಂದೆ ಗಾಂಧಿ

೧

ನಿನ್ನನರಿತು ನೋಡಲೂ ನಿನ್ನ ಕುರಿತು ಹಾಡಲೂ
ಕೋಟಿಕೋಟಿ ಜನದ ಮನದ ವ್ಯಥೆಯನೆಲ್ಲ ತೋಡಲೂ
ಅಯ್ಯೊ, ನಾ ಅಪಾತ್ರ, ತಂದೆ:
ಬರಡುನೆಲದ ಬೀಜ ನಾನು,
ಮರದ ಫಲದ ವರದ ಕನಸು ಕಾಣುವಂಥ ದೀನನು,
ಶಕ್ತಿಹೀನ, ಭಕ್ತಿಹೀನ, ಮಹಾಮ್ಲಾನನು.

ಆದರೇನೊ ಪುಣ್ಯಲೇಶದಿಂದ
ನಿನ್ನ ದಿವ್ಯ ಪಾದ
ತುಳಿದ ಕಾಲದೇಶದೊಳೇ
ಬದುಕಿ ನಾ ಕೃತಾರ್ಥನು.

ಯಾವ ಬಿತ್ತೊ ನಾನು ಅದೇ
ಇದೇ ನೆಲದ ಬಸಿರಲಿ
ಬಾನೆತ್ತರ ಬೆಳೆವಂದವ,
ಆ ಚಂದವ, ಬಿಸವಂದವ
ನಿನ್ನೊಳಣ್ಣ ಕಂಡೆನು;
ಅತ್ಯುನ್ನತ ಸುರಭೂಜವ–

ನಿಲ್ಲೆ ನೆಲದಿ ಕಂಡೆನು,
ಅಂತೆ ನಾನು ಧನ್ಯನು !

ಅದೂ ನಾನೆ ನನ್ನದೇನೆ
ಎಂದು ಮನಕೆ ತಂದೆನು;
ಒಂದೆ ನಿಮಿಷ ನಿನ್ನಗಾಥ
ಮಹಿಮೆಯಾಳಕಿಳಿದೆನು;
ನಿನ್ನ ದಿವ್ಯಕಾಂತಿಯಲ್ಲಿ
ಕರಕರಗಿದೆನಳಿದೆನು.

ಒಳಗಣ್ಣಿಗೆ ಕಂಡ ಹಾಗೆ
ಕರುಳು ಕೂಗಿ ಮೊರೆದ ಹಾಗೆ
ಗಿರಿಶಿಖರವು ಬೀಳಲು
ತಳದ ಪುಟ್ಟಕಲ್ಲು ಅಳಲಿ
ಮೊರೆಯುವಂತೆ ತೊರೆಯೊಳು
ಹಾಡಲೆಂದು ಬಂದೆ ತಂದೆ
ನನ್ನ ಸಣ್ಣ ನುಡಿಯೊಳು.

ಬಹುವಿಶಾಲ ಆಲದವೊಲು ಮೇಲೆ ಬಿಸಿಲ ಬೇಗೆಗೆ
ಒಡ್ಡಿ ನಿನ್ನ ಮೈಯ ನಿನ್ನ ದಟ್ಟತಂಪು ನೆಳಲಿಗೆ
ಕರೆದೆಯೆಲ್ಲ ಮನುಕುಲವನು; ಕಲಕಲಗಳ ಮೇಳಕೂ
ತಂದೆ ನೀನು ತಂದೆಯೊಂದು ಶ್ರುತಿ ಶುದ್ಧಿಯ ಸೊಬಗನು.

ಬಾಪೂ ಕಾವ್ಯಾಂಜಲಿ

ಮೇಲು ಕೀಳು ಇಲ್ಲವಲ್ಲಿ; ಇಲ್ಲ ಲಿಂಗ ಭೇದವು,
ಜಾತಿಮತ ವಿರೋಧವೂ, ವಾದವೂ ವಿವಾದವು.
ಸೋದರತೆಯ ಸಾಮಗಾನಲಹರಿ ನಿನ್ನ ಸುತ್ತಲೂ;
ಸಮಭಾವದ ಸುಮಧುರಗತಿ ಬಾಳುಬಾಳನೆತ್ತಲು.
ಸತ್ಯದ ವ್ರತ, ತ್ಯಾಗದ ಪಥ, ಜನಸೇವಾ ಶಪಥವು,
ಶಾಂತಿ, ದಾಂತಿ, ನಿಗ್ರಹ, ಧೃತಿ, ಜೀವದಯಾ ಯೋಗವು.

ಮೂಲಶಕ್ತಿಯಲ್ಲಿ ಭಕ್ತ, ದೀನದಲಿತರಲ್ಲಿ ರಕ್ತ,
ಭವದ ನೂರು ಎಳೆತ ಸೆಳೆತದಲ್ಲಿ ಕಲ್ಲಿನೊಲು ವಿರಕ್ತ,
ಜರೆದವನನು ಹರಸಬಲ್ಲ, ಇರಿದವನನು ಉಳಿಸಬಲ್ಲ
ತಾನೆ ಬೆಂದು ತಾನೆ ನೊಂದು ಅರಿಯದೆಯನು ಅರಸಬಲ್ಲ,
ನೀ ಮಹಾತ್ಮನು !

ಸತ್ತ ಜನವನೆತ್ತಿದಂಥ ಸಂಜೀವನ ಶಕ್ತಿ ನೀನು;
ಬತ್ತು ಮನವನಲ್ಲಿ ಒಲವ ಬಿತ್ತಿದಮರ ದೀಪ್ತಿ ನೀನು;
ಕಗ್ಗತ್ತಲ ಪಾಳೆಯದೊಳೆ ಬೆಳಕಿನ ಬಾವುಟವನು
ಏರಿಸಿ ಹಾರಿಸಿದ ವೀರಧೀರ ದೇವದೀಪ ನೀನು;

ನಮ್ಮಂತೆಯೆ ಬಾಳಿಕೂಡ ನಮ್ಮ ಗುರಿಯ ಗಿರಿಯ ಕೋಡ
ಏರಿ ನಿಂತೆ ನೀನು ಹೆಜ್ಜೆಹೆಜ್ಜೆ ಮೇಲಕೇರುತ,
ಶಿಖರದಲ್ಲಿ ನಿಂತು ಕೂಡ ಮರೆಯಲಿಲ್ಲ ನಮ್ಮನು,
ತೊರೆಹರಿಯಿತು ನಿನ್ನ ಹೃದಯ ತೊಳೆಯಲೆಂದು ನಮ್ಮನು,
ತೋಳನೆರಡನೆತ್ತಿ ನೀನು ಮೊರೆದೆ ದಿಕ್ಕುದಿಕ್ಕಿಗೆ;

"ಧರ್ಮದಿಂದ ಅರ್ಥ, ಕಾಮ; ಶರಣಾಗಿರಿ ಧರ್ಮಕೆ.
ಬದುಕಿನಾವುದು ಕಲಿತು ಬದುಕಿ
ಎದೆ ಎದೆಯೊಳು ಒಲವ ಬೆದಕಿ;
ಕಟ್ಟಿಕೊಳ್ಳಬೇಡಿ ನಿಮ್ಮ ನಡುವೆ ಸಣ್ಣ ಗೋಡೆಯು,
ಕಿತ್ತೊಗೆಯಿರಿ ಮನುಪುತ್ರರೆ, ನಿಮ್ಮನಳಿವ ದಾಡೆಯು;
ಹಿಡಿದು ನಡೆಯಿರಣ್ಣ ನೀವು ಸೋದರತೆಯ ಹಾದಿಯು."—
ಎಂದೆ ನೀನು; ಅಂತೆ ನಡೆದೆ; ನಡೆಯು ನುಡಿಯ ಮೀರಿತು;
ನಮ್ಮ ಕಣಸು ಹಾಳೆಗಳಲಿ ನಿನ್ನ ಮಾತು ಸೇರಿತು.

ನಿನ್ನ ಕಂಡು ಬೆರಗಾದರು, ನಿನಗೆ ನಮೋನಮ ಎಂದರು,
ನಿನ್ನ ಹೊಗಳಿ ಹಾಡಿದರು, ಹಣ್ಣುಕಾಯಿ ತಂದರು;
ನಿನ್ನ ಪಥವ ಮರೆತು ನಿನ್ನ ಪದಕೆ ಬಿದ್ದ ಅಂಧರು
ನಿನಗೆ ಗುಡಿಯ ಕಟ್ಟಿ ತಾವು ಬಚ್ಚಲಲ್ಲಿ ನಿಂದರು.

—ಅಮೃತ ಬಂದು ಮನೆಯ ಮುಂದೆ ಹರಿಯುತ್ತಿದ್ದರೂ
ವಿಷವನರಸಿ ಹೊರಟರಯ್ಯೋ ಈ ಮತಾಂಧರು.
ನೀ ಹರಡಿದ ಹಿರಿಬೆಳಕನು ನುಂಗುತಿರಲು ಕತ್ತಲು,
ದ್ವೇಷಾಗ್ನಿಯು ದಳ್ಳಿಸುತಿರೆ, ಕೊಲೆಸುಲಿಗೆಯು ಸುತ್ತಲೂ,
ನೊಂದೆ ನೀನು; ನಿನ್ನುದಗ್ರ ಚೇತನವೂ ಅದುರಿತು.
ಜಗವನೆಲ್ಲ ಹಬ್ಬಿದಂಥ ನಿನ್ನಾತ್ಮವು ಮುದುರಿತು;
ನೀನೆತ್ತಿದ ಒಲವಿನ ಗುಡಿ ನೆಲಕೆ ಕುಸಿಯ ತೊಡಗಿತು;
ನಿನ್ನ ಭಕ್ತಿ ವಿಶ್ವಾಸದ ಮೇರು ಕೂಡ ಸಡಿಲಿತು;
ನರಲೋಕದ ಶುಭದ ನೌಕೆ ಕೇಬಂಡೆಗೆ ಬಡಿಯಿತು.

೩

ಬರಸಿಡಿಲಂತೆರಗಿತು ಹಾ ! ಕೊಲೆಗಡುಕನ ಕೈ :
ಜರಾಜೀರ್ಣ, ತ್ಯಾಗಶೀರ್ಣ ಎಲುಬುಗೂಡು ಮೈ-

ಬಿತ್ತು ಕೆಳಗೆ, ಬಿದ್ದಹಾಗೆ
ನ್ಯಾಯಸತ್ಯದಯಾಧರ್ಮದೊಂದೆ ಆಧಾರವು;
ನಮ್ಮತಲೆಯ ಮೇಲೆ ಬಿತ್ತು
ನಮ್ಮ ಪಾಪ ಭಾರವು !

ಹಾ ರಾಮಾ ! ಎಂಬಾ ಮಡಿ
ನುಡಿಯೆರಡರ ರೆಕ್ಕೆ ಜೋಡಿ
ಬಡಿಯಿತೊಮ್ಮೆ, ಬಳಿಕ ಮೌನ;
ತಲೆಬಾಗಿತು, ಕೈ ಮುಗಿಯಿತು;
ಬಳಿಕ ಮೌನ, ಮೌನ !
ಹಾರಿತಯ್ಯೋ, ತಂದೆ, ನಿನ್ನ
ಜೀವ ವೈನತೇಯವು,
ನಿನ್ನ ನಿರಿದ ನಮಗಂಟಿತು
ಮಾಯದಂಥ ಗಾಯವು !

ನಂಬಲೆಂತು, ನಂಬಲೆಂತು, ಇಂಥ ಘೋರವಾರ್ತೆಯ ?
ಕೋಟಿಕೋಟಿ ಜನದ ಶೋಕವಾಣಿ ಆಕಾಶವಾಣಿ
ಮರಳಿ ಮರಳಿ ಮೊರೆದರೆ,
ನಂಬಲೆಂತು ನಮ್ಮ ತಂದೆ, ಕೋಟಿಕೋಟಿ ಜನದ ತಂದೆ
ಇನ್ನು ಇಲ್ಲ ಎಂದರೆ,

ನಾಡಿನೆಲ್ಲ ಕಡೆಯು ನಿನ್ನ ನಡೆಯು ಕಂಪು ನುಡಿಯು ಇಂಪು
ತುಂಬಿರೆ,
ನಾಡುನಾಡೆ ಭೂಮಿತಾಯಿಯಂಥ ನಿನ್ನ ಮರೆತು ಕೂಡ
ಒಳಗೊಳಗೇ ನಂಬಿರೆ,
ನಮ್ಮ ಮತಿಗೆ ನಮ್ಮ ಕೃತಿಗೆ ನಮ್ಮ ಬಾಳರೀತಿಗೆಲ್ಲ
ನೀನೆ ನಿಕಷದಂತಿರೆ,
ಸೋತ ಜನಕು, ಭೀತ ಜನಕು, ದಿಕ್ಕುಗೆಟ್ಟ ದೀನ ಜನಕು,
ಆರ್ತರಿಗು, ಅನಾಥರಿಗೂ ನೀನೆ ತ್ರಾಣನಂತಿರೆ,
ಭಾರತವೇ ನೀನು ನೀನೆ ಭಾರತದಂತಾಗಿರೆ,
ಇದ್ದಕಿದ್ದ ಹಾಗೆ ನೀನು ಇಲ್ಲವೆಂದು ಎಂದರೆ,
ನಂಬಲೆಂತು, ಹೇಳು ತಂದೆ, ಇಂಥ ಘೋರ ವಾರ್ತೆಯ ?

ಇಂಥ ಅಳಲನುಲಿಯಬಲ್ಲ
ಬಾಯಿಯೆಲ್ಲಿದೆ ?
ಜೀವರತ್ನ ಕಳೆದ ಬಳಿಕ
ಬಾಳೊಳೇನಿದೆ ?
ಕಂಬನಿಗೂ ನಿಡುಸುಯ್ಲಿಗು
ಉಪವಾಸಕು ವನವಾಸಕು
ತೀರದಂಥ ಕಷ್ಟವು;
ನರ ಲೋಕದ ತಳಪಾಯನೆ
ಸಡಿಲಿದಂಥ ನಷ್ಟವು;
ಯುಗಯುಗಗಳೆ ಕಳೆಕಳೆದರು
ನವೆಯದಿಂಥ ಪಾಪವು,

ನವೆನವೆದರು ಕಳೆಯುದಯ್ಯೊ
ನಮ್ಮ ಹೃದಯ ತಾಪವು !

ಇಂದು ದೇಶದೇಶ ಶೂನ್ಯ. ಶೂನ್ಯವೆಲ್ಲ ಹೃದಯವು,
ಇಂದು ವೀರಧೀರ ಮುಖವು ಕೂಡ ನೋಡು ಸಭಯವು.
ಅಮೃತವಿಂಗಿ ಹೋಯ್ತು, ಇನ್ನು ವಿಷದಾಳಿಕೆ ಸುಲಭವು,
ಕರ್ಣಧಾರನಿಲ್ಲವಿನ್ನು, ಬಾಳದೋಣಿ ಅಲೆವುದು,
ತೆರೆತೆರೆಯೂ ಮುಸಗಿ ಮುಸಗಿ ಇನ್ನು ಅದನು ನೂಕುವುದು !
ಕಂಡ ಕಣಸು ಕೊನೆಗಂಡಿತು, ಜ್ವಲನದಾಸೆಹಿಂಗಿತು,
ಹೊಂಡದಲ್ಲಿ ಭಂಡಬಾಳು, ಮುಗಿಲಿನಾಸೆ ಮುಗಿಯಿತು.
ಕಾಣದೂರ ದಾರಿಯಲ್ಲಿ ಬೆಳಗುತಿದ್ದ ದೀಪವು
ಆರಿಹೋಯ್ತು; ಇನ್ನು ಕತ್ತಲಲ್ಲಿ ಚಿರವಿಲಾಪವು.
ಅಳಿದರೇನು, ಉಳಿದರೇನು ನಮ್ಮಂಥ ಕನಿಷ್ಠರು ?—
ನರಲೋಕದ ನತದೃಷ್ಟರು, ಶ್ರೇಯಃಪಥಭ್ರಷ್ಟರು ?
ನೀನು—ಎಲ್ಲೊ ಒಮ್ಮೆ ನೆಲದ ತಪದ ಪುಣ್ಯಪಾಕಕೆ
ಮೊಳೆತು ಬರುವ ದೇವಬೀಜ; ಯುಗಯುಗಗಳ ಶೋಕಕೆ
ಬರುವ ಶಾಂತಿ ತೇಜ; ಬುದ್ಧ ಕ್ರಿಸ್ತ ರತ್ನಮಾಲೆಗೆ
ಸೇರಿದಂಥ ರತ್ನರಾಜ; ಇನ್ನು ಇಂಥದೆಲ್ಲಿದೆ,
ನಮ್ಮ ತಂದೆ, ನಮ್ಮ ಗಾಂಧಿ, ನಮ್ಮ ಬಂಧುವಲ್ಲದೆ ?

ಹೋದನವನು ದೂರದೂರ; ಮೂಲಕಾಂತಿಯೊಡಲಲಿ
ಕರಗಿ ಹೋದ; ಅರಗಿ ಹೋದ ಹಿರಿಬೆಳಕಿನ ಕಡಲಲಿ;
ನಾವು ಇಲ್ಲನಾಥರಾಗಿ ಅತ್ತುಕೂಗಿ ಕರೆದರೂ

ಬಾರನವನು; ಅವನ ದಯೆಯು ನಗೆಯು ಇನ್ನು ಹೊಳೆಯದು;
ಅವನ ಸೂಜಿಗಲ್ಲು ಬಾಳು ನಮ್ಮನಿನ್ನು ಸೆಳೆಯದು;
ಅವನ ನುಡಿಯು ವೇದಘೋಷ ಇನ್ನು ಇಲ್ಲಿ ಮೊಳಗದು;
ಇನ್ನು ಅವನ ಬೆಳಕಿನಲ್ಲಿ ನಮ್ಮ ಬಾಳು ಬೆಳಗದು;
ಮಕ್ಕಳೊಡನೆ ಮಗುವೆ ಆಗಿ, ದೀನರಲ್ಲಿ ದೀನನಾಗಿ
ಎಲ್ಲ ಜನಕು ಸತ್ವಶಾಂತಿ ಸಾಂತ್ವನದ ನಿಧಾನವಾಗಿ
ಹೋದನಯ್ಯೊ, ಬಾರನಿನ್ನು ಆ ಅಜಾತಶತ್ರುವು,
ನಮ್ಮ ತಾಯಿ, ನಮ್ಮ ತಂದೆ, ನಮ್ಮ ಬಂಧು ಬಳಗವು !

ಆದರಿನ್ನು ಇಲ್ಲೆ ಇಹುದು ಅವನ ಜೀವಸಾರವು;
ಮೊರೆಯುತಿಹುದು ಇನ್ನು ಇಲ್ಲೆ ಅವನ ದನಿ ಉದಾರವು:
ಹೆಜ್ಜೆ ಹೆಜ್ಜೆ ಮೂಡಿದಂಥ ಅವನ ಬಾಳ ದಾರಿಯು;
ಮೆಟ್ಟು ಮೆಟ್ಟಿಲಾಗಿ ಅವನು ಏರಿದಂಥ ಶಿಖರಿಯು;
ನಾಡ ಮೂಲೆಮೂಲೆಯಲ್ಲು ಅವನ ಮೇಲುಪಂತಿಯು;
ಬೆಳಗುತಲಿದೆ ಮನಮನದಲಿ ಅವನ ದೇವಕಾಂತಿಯು.

ಏಳುವವರೆ ಏಳಿ; ಎದ್ದು ಹಿಡಿಯಿರವನ ಪಥವನು,
ಬಾಳುವವರೆ, ಇದ್ದು ಬಾಳಿ ಅವನ ವೀರವ್ರತವನು
ಏರುವವರೆ, ಏರಿ ಅವನು ಏರಿದಂಥ ರಥವನು
ಮುಟ್ಟುವವರೆ, ಮುಟ್ಟಿ ಅವನು ತೋರಿದಂಥ ಗುರಿಯನು
ಪಡೆಯುವವರೆ, ಪಡೆಯಿರವನ ಆತ್ಮಪರಮಸಿರಿಯನು,

ಅವನ ದಾರಿಯೊಂದೆ ದಾರಿ; ಉಳಿದುದೆಲ್ಲ ಹಳುವವು;
ಅವನ ಗುರಿಯೆ ಗುರಿಯು, ಉಳಿದುದೆಲ್ಲ ವಿಫಲ ಚಪಲವು !

—ಎಂ. ಗೋಪಾಲಕೃಷ್ಣ ಅಡಿಗ

# ಮಹಾತ್ಮನಿಗೆ

— ಪಲ್ಲವಿ —

ನಮನವಿದೋ, ನಮನವಿದೋ, ನಮನ ಸಹಜಯೋಗಿ!
ಸಮತೆಗಾಗಿ ಬಾಳ್ವೆಯನೆ ಬೇಳ್ದ ನವವಿರಾಗಿ!

೧

ಕತ್ತಲಲಿಯು ಗುರಿಯ ದಾರಿ ಕಾಂಬ ಕಣ್ಣು ನಿನ್ನದೊ,
ತತ್ತ್ವಮಾತೆಯಶ್ರುತ ರವ ಕೇಳ್ವ ಕಿವಿಯು ನಿನ್ನದೊ,
ವಿಗಡ ರಜದೊಳಿದ್ದು ಸೊಪಡು ತಗಲದ ಮನ ನಿನ್ನದೊ,
ಜಗದ ಸೌಖ್ಯಕೆಂದೆ ಬೆರಳನೆಣಿಪ ಬುದ್ಧಿ ನಿನ್ನದೊ....
ನಮನವಿದೋ, ನಮನವಿದೋ, ನಮನ ಸಹಜಯೋಗಿ

ನಿನ್ನ ಉಸಿರದೊಂದೊಂದೂ ಜಡಕೆ ಜೀವನಿತ್ತಿತೊ,
ನಿನ್ನ ಧಮನಿಮಿಡಿತವಹಹ ಚೈತನ್ಯವ ಬಿತ್ತಿತೊ,
ನಿನ್ನ ವಾಣಿ ದಿಗ್‌ದೇಶಕೆ ನನ್ನಿಯ ನೆಲೆ ತಿಳುಹಿತೊ,
ನಿನ್ನ ಗೆಯ್ಮೆ ಸಾವ ಜೀವಜಂಗುಳಿಯನ್ನುಳುಹಿತೊ....
ನಮನವಿದೋ, ನಮನವಿದೋ, ನಮನ ಸಹಜಯೋಗಿ!

೩

ಮೈತ್ರಿಯಿಂದೆ ಶತ್ರುಗಳನು ಸೋಲಿಸಿರುವ ವೀರ,
ಮೃತ್ಯುವನೂ ಮಿತ್ರನಂತೆ ಸ್ವಾಗತಿಸಿದ ಧೀರ,
ನಿನ್ನ ನೌಕೆ ನಂಬಿದರನು ತಲ್ಪಿಸಿತ್ತು ತೀರ—
ನೀನು ನಡೆದ ದಾರಿಯದೇ ಸತ್ಯಧರ್ಮ ಸಾರ....
ನಮನವಿದೋ, ನಮನವಿದೋ, ನಮನ ಸಹಜಯೋಗಿ!

೪

ಬಲುಮೆ-ಮೋಸಗಳನು ಹಣಿಯೆ ಕಲಹಗೈದೆ ರಾಜ !
ಕಲಿಸಿದೆ ಜೀವನವ ಜೆಲ್ವುಗೊಳಿಪ ಕಲೆಯುನೋಜ !
ಸಿಲಿಸಿದೆ ನಾಡಿಗರ ಹೃದಯದೊಳಗೆ ದಿವ್ಯತೇಜ—
ಸಲಿಪುದೆಂತು ಶ್ರದ್ಧಾಂಜಲಿ ಎಲ್ಲರಂತೆ ಸಾಜ !....
ನಮನವಿದೋ, ನಮನವಿದೋ, ನಮನ ಸಹಜಯೋಗಿ!

* * * *

ನಮನವಿದೋ, ನಮನವಿದೋ, ನಮನ ಸಹಜಯೋಗಿ,
ಸಮತೆಗಾಗಿ ಸರ್ವಸ್ವವ ತೆತ್ತ ಮಹಾತ್ಯಾಗಿ !

—ಆನಂದಕಂದ

# ಮಹಾತ್ಮರ ಚಿತಾಭಸ್ಮ ವಿತರಣೆ

ಯುಗದ ಆತ್ಮನು ಆ ಮಹಾತ್ಮನ
ಭಸ್ಮ ವಿತರಣವಾಗಲಿ!

ಜಗದ ಜೀವನದಂತರಂಗದ
ಗಂಗೆಯಲಿ ನೆರೆ ಬೆರೆಯಲಿ!

೧

ಕ್ರಾಂತಿಯಲಿ ಕ್ರೌರ್ಯದಲಿ ಕೊಲೆಯಲಿ
ಕಲಕವಾಗಿಹ ಜೀವನ,

ಶಾಂತಿದೂತನ ಚಿತೆಯ ಭಸ್ಮದಿ
ಆಗಿ ಹೋಗಲಿ ಪಾವನ!

ನೋಡಿ! ಜಮುನೆಯ ಜಲತರಂಗದಿ
ತೇಲಿ ತೇಲಿ ಬರುತಿದೆ!

ಅಮರ ಗಂಗೆಯು ವಿಮಲ ತುಂಗೆಯು
ಕೊರಳು ತುಂಬಿ ಬರುತಿದೆ!

೨

ದಗ್ಧವಾಗಿಹ ಚಿತೆಯ ಜ್ಯೋತಿಯೆ
ಜಗಕೆ ದೀಪ್ತಿಯ ನಿತ್ತಿದೆ!

ಭಗ್ನವಾಗಿಹ ಜಗದ ಹೃದಯದಿ
ಮಿಂಚುಮಾಲೆಯು ಹೆತ್ತಿದೆ!

ಅಂದು ಜಮುನೆಯು ಅಂತರಂಗದಿ
ಬೆಂಕಿ ಬುಗ್ಗೆಯು ಹೊತ್ತಿದೆ!

ಇಂದು ನಾಳೆಗೆ ನುಗ್ಗಿ ಮೋನದಿ
ಶಾಂತಿಯು ಮರೆಹೊಕ್ಕಿದೆ!

೩

ಜಾತಿ ಜಾತಿಯು ಕೋತಿಗಳ ಘನ,
ಘೋರ ಜೀವನ ರಂಗದಿ

ಬಲಿಯಾದ ಭಾರತ ಕೋಟಿ ಕೋಟಿ
ಜೀವಿಗಳ ತನು ಭಂಗದಿ

ನೀಲ ವರ್ಣದ ಜಲಧಿ ಕೆರಳಿ,
ರಕ್ತರಂಜಿತವಾಗಿದೆ!

ಭಾಗ್ಯದೇವನ ಭಸ್ಮವಿತರಣ—
ದಿಂದ ಕೊಳೆ ತಿಳಿಯಾಗದೆ!

೪

ಧರೆಯ ಮನ್ವಂತರದ ತವಸಿನ
ಬಯಕೆ ಹಣ್ಣಿಸಿದಂತೆನೆ

ಕಾರಣಿಕ ಸೀಮಾ ಪುರುಷನೆ ನವ
ನವ್ಯ ವಿಶ್ವದ ಜನಕನೆ!

ಸೇವೆಯಲಿ ಹಣ್ಣಾಗಿ ಮಾಗಿ
ಮಧುರನಾಗಿಹ ಯೋಗಿಯೆ

ತವ ವಿಯೋಗದಿ, ನಾಡ ಕಣ್ಣಲಿ
ಕಡಲುಗಳು ಬರಿದಾಗಿವೆ !

೫

ಶಾಂತಿ ಸತ್ಯಗಳಮರ ತತ್ವದಿ
ಗೌರಿ ಶಂಕರದಂತೆಯೆ,

ನಿಂತ ನಿಲುವಿಕೆಯಿಂದ ಬೆಳಗಿದ
ತಿಂಗಳಿನ ನವ ಕಾಂತಿಯೆ !

ಗೂಢ ಪಕ್ಷಿಯ ಕ್ರೂರ ಕೃತ್ಯದಿ
ಜೀವ ಪಕ್ಷಿಯು ಹಾರಿತೆ !

ನಮ್ಮ ನೇಹದ ಕರುಳ ಕವಚವು
ನಿನಗೆ ರಕ್ಷೆಯ ತೋರಿತೆ !

೬

ನಿನ್ನ ಭಸ್ಮದ ಅಣುವಿನಾಳದಿ
ದಿವ್ಯ ಶಕ್ತಿಯು ಹುದುಗಿವೆ !

ನಿನ್ನ ಸಾಹಸದಮರ ಜೀವನದಲ್ಲಿ
ಸ್ವರ್ಗದ ಕನಸಿದೆ !

ಒಂದೆ ಬಿಂದುವಿನಲ್ಲಿ ಸತ್ಯದ—
ಅಮರ ಜೀವದ ಕೆಚ್ಚಿದೆ!

ಹಿಂದಮಾತೆಯ ಅಮೃತ ಪುತ್ರನ
ವಿಶ್ವಪ್ರೇಮದ ನೆಚ್ಚಿದೆ!

—ಎಸ್. ಡಿ. ಇಂಚಲ

# ಗಾಂಧೀಜಿ

೧

ಎರಡೂವರೆ ಶತಮಾನಕೆ
ದಬ್ಬಾಳಿಕೆ ಯಜಮಾನಿಕೆ
ದುರ್ದೆಸೆಗಳ ದಿನಮಾನಕೆ
ಉಸಿರಾಡಿಸಲನುಮಾನಿಕೆ
ಈ ದೇಶದ ಸಂತಾನಕೆ
ಉಸಿರೇ ಬರಲಿಲ್ಲ
ಹೆಸರೇ ಇರಲಿಲ್ಲ.

೨

ಪರದಾಸ್ಯದ ನೊಗಭಾರಕೆ
ಕುತ್ತಿಗೆಯುರುಲಿನ ಹಾರಕೆ
ಅರೆಮರಣದ ಸಂಸಾರಕೆ
ಬೇಸತ್ತವರೆದೆಯಾರಿಕೆ
ಈ ದೇಶದೊಳೆದೆಯಾರಿಕೆ
ಉಸಿರೇ ಬರಲಿಲ್ಲ
ಹೆಸರೇ ಇರಲಿಲ್ಲ.

೩

ಒಡಲುರಿದವು ಒಳಗೊಳಗೆ
ತಲೆಕುಸಿದವು ಕೆಳಕೆಳಗೆ
ದುಃಖೋದಯ ದಿನಬೆಳಗೆ
ಹೊಲೆಬಾಳಿನ ವಿಷಗಳಿಗೆ
ದೇಶದ ಪೀಳಿಗೆಗಳಿಗೆ
ಉಸಿರೇ ಬರಲಿಲ್ಲ
ಹೆಸರೇ ಇರಲಿಲ್ಲ.

೪

ಹಿಮವಲಯದ ಪುಣ್ಯಾಚಲ
ಋಷಿತರ್ಪಣ ಗಂಗಾಜಲ
—ವ್ಯವೆತ್ತಿತು ನಮ್ಮನೆಲ
ಮಾನವ ಬಲಿದಾನದ ಫಲ
ತಲೆಯೆತ್ತಿತು ಭಾರತಕುಲ
ಅಮೃತರಾಳಾಳ್ಗೆ
ನೆಲ ಮಂಗಳ ಬಾಳ್ಗೆ.

೫

ಹಗೆತನಗಳ ಹೊಗೆ ಹಾರಿಸಿ
ನೊಂದವರೆದೆಯುರಿ ಆರಿಸಿ
ದೇಶದ ಕಣ್ಣೀರೊರಿಸಿ
ರಾಷ್ಟ್ರಧ್ವಜ ಕೈಗೆರಿಸಿ

ಬೀಳ್ಕೊಂಡರು ಪಡೆವೆರಿಸಿ
ಅಮೃತರಾ[illegible]ಳ್ಗೆ
ನೆಲಮಂಗಳ ಬಾಳ್ಗೆ.

೬

ಸ್ವಾತಂತ್ರ್ಯಕೆ ಸರ್ವಾರ್ಪಣ
ಸತ್ಯಾಗ್ರಹ ಬಲಿತರ್ಪಣ
ನಾಡಿನ ನೆಲ ಸಮರಾಂಗಣ
ಕಡಿದೊಗೆದೆವು ದಾಸ್ಯದ ಋಣ
ತೊಟ್ಟೆವು ಎದೆಯೊಲವಿನಪಣ
ಅಮೃತರಾ[illegible]ಳ್ಗೆ
ನೆಲಮಂಗಳ ಬಾಳ್ಗೆ.

೭

ಹೇ ಭಾರತ ಪುಣ್ಯವ್ರತ !
ಧೀಶಕ್ತಿಯು ದೇವವ್ರತ!
ಸ್ವಾತಂತ್ರ್ಯದ ಸತ್ಯವ್ರತ
ಗಾಂಧೀಜೀ ಗೆಲ್ಗೆ !
ಬರಬಾರದ್ದೇ ಬಂದಿತು !
ಸೆರೆಬಿಡಿಸಿದ ಕೈ ಕೊಂದಿತು !
ಈ ರಾಷ್ಟ್ರದ ಋಣ ಸಂದಿತು
ನೆಲ ಮಂಗಳ ಬಾಳ್ಗೆ !

—ಎಸ್. ಆರ್. ಎಕ್ಕುಂಡಿ.

# ಮರಣ ?

ಅದ್ಭುತವು ಅದ್ಭುತವು ವಿಶ್ವಕದ್ಭುತವು
ಸತ್ಯಶರಣನ ಸಂದ ಮರಣದದ್ಭುತವು
ಮಣಿಹ ಸಂದಿತು; ದೇಹ ಕೆಳಗೆ ಇಟ್ಟ;
ಧ್ಯೇಯವನೆ ನಕ್ಷತ್ರ ಮಾಡಿ ಬಿಟ್ಟ.
ಎಂಥ ನಗು ! ಎಂಥ ಮಗು ! ಎಂಥ ಮನುಜ !
ನಮ್ಮಂತೆ ಕಂಡರೂ ದೇವತನುಜ.
ಗಾಂಧಿಯೆಂಬುದು ಹೆಸರೆ ? ಮನುಷ್ಯಾಕೃತಿಯೆ ?
ಗಾಂಧಿಯೆಂಬುದು ಶಿಖರ ದಿವ್ಯ ಕೃತಿಯೆ !
ಕಡ್ಡಿಯಲುಗದು ಆಕಸ್ಮಾತ್ತಿನಿಂದ
ಗುಡ್ಡ ಉರುಳೀತೇನು ಗುಂಡಿನಿಂದ ?

—ಅಂಬಿಕಾತನಯದತ್ತ

# ಶ್ರದ್ಧಾಂಜಲಿ

ಹಿಂಸೆ ಕೊನೆಗಹಿಂಸೆಯನ್ನು ಗುಂಡುಹಾಕಿ ಕೊಂದಿತೋ?
ತನ್ನ ಕೊಲೆಯು ಕೊನೆಗಾಣಿಸೆ ಇವಗೆ ಶರಣು ಬಂದಿತೋ?
'ಅಯ್ಯೊ ಇವನು ಅಮರ, ನಾನೆ ತಾನೆ ಸತ್ತೆ' ಎಂದಿತೋ–
'ನಾನೆ ಸತ್ತೆ' ಎಂದಿತೋ?

ಗಾಂಧಿದೇಹ ಸುಟ್ಟ ಬೆಳಕು ಜಗದ ತಮವ ಕಳೆದಿದೆ,
ಗಾಂಧಿ ಹೋದರೆಂಬ ಸುದ್ದಿ ಬಾನ ತುಂಬಿ ಉಳಿದಿದೆ,
ಗಾಂಧಿಗಂಧ ದಿಗ್–ದಿಗಂತ ಕೀರ್ತಿರೂಪ ತಳೆದಿದೆ—
ಕೀರ್ತಿರೂಪ ತಳೆದಿದೆ!

ತೀರ್ಥಗಳ ಪವಿತ್ರ ಮಾಡಿದಂಥ ತೀರ್ಥರೂಪನು
ಯಜ್ಞವಾದ ಬಾಳಿನಲ್ಲಿ ತಾ ಸುಖಸ್ವರೂಪನು
ಸೋಲನೆಲ್ಲ ಗೆಲವುಗೊಳಿಸಿ ಮುಕ್ತನಾದ ಭೂಪನು—
ಮುಕ್ತನಾದ ಭೂಪನು.

ಬತ್ತಿ ಸುಟ್ಟುಹೋದರೇನು ಬೆಳಕು ಸಂದಿತೆಂಬರೆ?
ಹಾಕಿ ಬತ್ತಿ ದೀಪವೆತ್ತಿ ಇರುವ ಜ್ಯೋತಿ ಕಾಂಬರೆ!
ಎಣ್ಣೆ ತೀರಿತನ್ನಬೇಡಿ ಬೇರೆ ನೇಹ ತುಂಬರೆ—
ಬೇರೆ ನೇಹ ತುಂಬರೆ?

# ಜಯ ಜಯಾ ಗಾಂಧಿ ಮೋಹನಾ

ಜಯ ಜಯಾ ಗಾಂಧಿ ಮೋಹನಾ
ರಾಷ್ಟ್ರದೋಹನಾ
ಸತ್ಯ ಶರಣಾ—ಸತ್ಯ ಶರಣಾ

ಕಾದಿದಿರಿ ಶಾಂತಿಗೆ ಅಂತು
ಅಂತಸ್ಥ ಬಂತು
ಭೀಷ್ಮ ಮರಣಾ—ಭೀಷ್ಮ ಮರಣಾ

ಅಸರಂತ ನಿಮ್ಮ ಜೀವನಾ
ಒಂದೆ ಸಮ ರಣಾ
ಆತು ಕೊನಿಗೂ—ಆತು ಕೊನಿಗೂ

ಸೀಳಿದಿರಿ ಸಾವಿನ ತಲೀ
ಕೊಟ್ಟೆರಿ ಬಲೀ
ಕೀರ್ತಿಶನಿಗೂ-ಕೀರ್ತಿಶನಿಗೂ

ಒಡದರ ನಿಮ್ಮ ಒಡಲೋ
ಬಂತು ಸಿಡಿಲು
ರಣಬೊಬ್ಬಿ ನಿಮ್ಮ ಹೆಸರೋ
ಏನು ಕುಸುರು

ಮಿಡಿದಿತ್ತು ಮಿಂಚಿನ ಕಾಂತಿ
ಮುಗಿಲಿನ ತಂತಿ

ಬಯಲಾತು ಮಾತಿನ ಭ್ರಾಂತಿ
ತಣ್ಣಿಸಿತು ಶಾಂತಿ

ಊದ್ಯಡದ ಕಾಳಿಯು ಕ್ರಾಂತಿ
—ಮಾನವೋತ್ಕ್ರಾಂತಿ

ಸ್ವಾತಂತ್ರ್ಯದೂತ ಜಯ ಜಯಾ
ಜಾತ ನಿರ್ಭಯಾ
ರಾಷ್ಟ್ರಹವನಾ—ರಾಷ್ಟ್ರಹವನಾ

ಕವಿಹೃದಯ ಜಾತ ಪ್ರೇರಣಾ
ಪ್ರೇಮಕಾರಣಾ
ಇಗೋ ಕವನಾ—ಇಗೋ ಕವನಾ

ಕರ್ನಾಟ ದೇಶದ ಜನಾ
ಕನ್ನಡಿಸಿತು ಮನಾ
ಹಾಡಿತು ಕವಿಗಣಾ

* * * *

ನೆನಸೇವು ನಿಮ್ಮ ಆ ನಗಿ
ಒಳಗ ಇಲ್ಲ ಧಗೀ
ಬರೇ ಬೆಳಕು—ಬರೇ ಬೆಳಕು

ನಿಂಮಾತು ಮಿಂಚಿನ ಗೆರಿ
ಎಲ್ಲಿ ಸರಿಸೂರಿ
ಇಲ್ಲಿ ಅಳಕು—ಇಲ್ಲ ಅಳಕು

ನಿಮ್ಮ ಕಾರ್ಯ—ಕಿರಿಬೆಳ್ಳಿಸಾ ಸೆಲಿ
ಹಿಗ್ಗಿಧಾಂಗ ಹೊಳಿ
ಮುಂದ ಹರವು—ಮುಂದ ಹರವು

ನಿಮ್ ಹೃದಯದಾಗ ಇಲ್ಲ ಪಾಪ
ಶುದ್ಧ ನಿರ್ಲೇಪ
ಸದಾ ತೆರವೋ—ಸದಾ ತೆರವು

ನಿಮ ಚರಿತವಾಯ್ತು ಪೂರ ಕಥೀ
ಧರ್ಮದ ಗತೀ
ನಿಮ್ಮೊಲುಮಿಗಿಲ್ಲವೋ ನೆಲೀ
ಎಲ್ಲೀನು ಬೆಲೀ

ವೈರಿಯನು ಕೂಡ ಒಳಗೊಂಡು
ಪ್ರೇಮದ ಕಂಡು

ಅಬಲೆಯರ ಬಾಲಕರ ಹಿಂಡು
ಮಾಡಿದಿರಿ ಪಂಡು

ಮುರಿದಿರಿ ಭೇದದ ಸಂದು
ವಿಶ್ವದ ಬಂಧು

ನಿಮ ನಾಲಿಗೂ ಕೊನಿಗೂ ಜಯಾ
ಯಾರಿಗಿದೆ ಭಯಾ
ನಿತ್ಯಕರುಣಾ—ನಿತ್ಯಕರುಣಾ

ನೀವಿಟ್ಟ ಒಂದೊಂದಽ ಅಡಿ
ಮುಕ್ತಿಯ ಗಡಿ
ಬಂಧಹರಣಾ—ಬಂಧಹರಣಾ

ರಾಮನಾಮದಾಗ ನಿಮ್ಮ ಪ್ರೇಮಾ
ಅದೇ ನಿಂ ನೇಮಾ
ಕೊನೀಸೊಗಲು—ಕೊನೀಸೊಡಲು

ಎಲ್ಲರಿಗು ಜನರವರ ರೀ[illegible]
ನೀತಿ ಜೇಡಿ ಪ್ರೀ[illegible]
[illegible]—[illegible] ತೂಪಲು

ಬಟಾಬಯಲಿನ್ಯಾ[illegible] ಸ್ವರಾಜ್ಯ
ನೋನದ ಕೂಡ ವ್ಯಾಜ್ಯ
ಸತ್ಯ ದಾ[illegible]— ಸತ್ಯ ದಾಳಿ

ನಿಂ ಚಳ್ವಳಿಯು ಮಾಡುವ ನೀತಿ
ಅಸಲ್ ಸಿರ್ಫನೀತಿ
ಹೋಳಿಕೇಳಿ—ಹೋಳಿಕೇಳಿ

ಛಲಬಲ ಇದ್ದು ಧೀರಾಽ
ಎಂಥ ಶೂರಾಽ

ಆಸಕ್ತಿ ಇಲ್ಲದಾ ವೀರಾ
ಪುಟ್ಟ ಪೂರಾಃ

ನಿಂ ಸ್ಮರಣಾ ಸ್ವರಾಜ್ಯದ ಹರಣಾ-
ದೀನ ಉದ್ಧರಣಾ

ನಿಂ ಚರಣಾ ದಾಸ್ಯ ಸಂತರಣಾ-
ದೃಷ್ಟಿ ವಿಸ್ತರಣಾ

ಸುತ್ತಿರಲು ತಿಮಿರದಾವರಣಾ-
ಆಶೆಯು ಕಿರಣಾ

ವರುಷವರುಷದ ಶ್ರಾದ್ಧದ ದಿನ
ಶ್ರದ್ಧೆಯ ಘನ
ಉಪ್ಪಿನ ರಿಣಾ—ಉಪ್ಪಿನ ರಿಣಾ

ತಿರಗತ್ತದ ಸೂಲಿನ ರಾಟಿ
ಕವನ ಹೊಸ ಧಾಟಿ
ಕೇಳು ಸುಗುಣಾ—ಕೇಳು ಸುಗುಣಾ

ನಿಂಗುಣಾ ಆಕಾಶದ ಚುಕ್ಕಿ
ಪಡೆದ್ಧಾಂಗ ರೆಕ್ಕಿ
ಕುಣಿತಾವ ಮುಂದ-ಕುಣಿತಾವ ಮುಂದ

ಅಂಬಿಕಾತನಯನ ಬಂಧ
ಸಮುದ್ರದ ಅಂದ
ಭಾವ ಭವನಾ-ಭಾವ ಭವನಾ

ಸ್ವಾತಂತ್ರ್ಯಜೇತ ಜಯಜಯಾ
ಹುಟ್ಟಾ ನಿರ್ಭಯಾ
ದೇವಹವನಾ-ದೇವಹವನಾ

ಕವಿಹೃದಯ ದೀಪ್ತ ಭಾವನಾ
ಪ್ರೇಮ ಜೀವನಾ
ಕರುಣ-ಕವನಾ-ಸ್ಮರಣಕವನಾ.

— ಅಂಬಿಕಾತನಯದತ್ತ

# ದಿವ್ಯ ಜ್ಯೋತಿ

ತಿಳಿ ನೀಲವಲ್ಲಿ ತಾ ನೀಲನಾಗಿ ಅವ ಹೋದ ದೂರ ದೂರ
ಬೆಳಗಿಹುದು ಇಲ್ಲಿ ಅವ ಬಿಟ್ಟ ಬೆಳಕು; ಇನ್ನೊಮ್ಮೆ ಏಕೆ ಬಾರ ?
ಅಂದು ಸಂಜೆ ಪ್ರಾರ್ಥನೆಗೆ ದೇವಮಂದಿರದ ದಾರಿಯಲ್ಲಿ
ಆಚೆ ಈಚೆ ಮೊಮ್ಮಕ್ಕಳಿಬ್ಬರಲಿ ಪ್ರಿಯ ಭಾರ ಚೆಲ್ಲಿ
ಜಗದ ಕರುಣೆ ನಡೆದಂತೆ ನಡೆದು ಮಂದಿರದ ಪೀಠವೇರಿ
ನಿಂದಲ್ಲಿ - ಜನಪ್ರೀತಿ, ಜೀವಪ್ರಾಣವಾಯು ದೇವನಲ್ಲಿ

ಎಸೆದ ಗುಂಡಿಗಾ ಕುಸಿದ ದೇಹದಲಿ ವಿಮಲ ರಕ್ತ ಚೆಲ್ಲಿ
ಮೀಯಿಸಿತ್ತು ಈ ಜಗದ ಮನವನೇ ಶೋಕ ಜಲಧಿಯಲ್ಲಿ
ಮುಗಿದ ಕೈಯು ಮುಗಿದಂತೆ ಇತ್ತು: ನೆಲಸಿತ್ತು
ಕ್ಷಮೆಯು ಮೊಗದಿ
ಎದೆಯೊಳೆಂಥ ಶಾಂತಿ ಭಾವವಿತ್ತು ! ಇದನಾರು ಬಲ್ಲ ಜಗದಿ ?

ಹೋದ ಹೋದನವ ತ್ಯಾಗಜೀವನದ ತುತ್ತತುದಿಯನೇರಿ
ಏರಿ ಏರಿದೊಲು ಅಂತರಂಗದೈಸಿರಿಯ ಜಗಕೆ ತೂರಿ
ಸತ್ಯ-ಪ್ರೇಮಗಳ ಸತ್ವವನ್ನೆ ಕಣ್ಣೆದುರು ಎತ್ತಿ ತೋರಿ
ಬೇರೆ ಲೋಕದನುಭ[illegible]ರಿ ಅವ ಹೋದನಾವ ದಾರಿ ?

ಎನಿತು ಸರಳು ನುಡಿ, ಎಷ್ಟು ಸಹಜ ನಡೆ, ಮಸೆದ
ಮಹತಿಯೀಸು

ಅವನ ಎದೆಯ ಉನ್ನತಿಯು ನಿಲುಕುವದು ಯಾವ

ಗಿರಿಯ ಸಾನು ?

ಇಹುದೆ ಅವನ ಕರುಣೆಯನು ಧರೆಗೆ ಕರೆವಂಥ ಕಾಮಧೇನು ?

ಅವನು ಗೈದ ಲೀಲೆಯಲಿ ಲಯಿಸಿತೆಂಥವರ "ನಾನು—ನಾನು".

ತಿಳಿದಿಹುದು ಚಿತ್ತ; ಹರಿದಿಹುದು ನೋಟ ಮೇಲಕ್ಕೆ ಬಾನಿನೆಡೆಗೆ

ಆ ಜಾಡ ಹಿಡಿದು ಇಳಿದಂತೆ ಇಹುದು ಬೆಳಕೊಂದು ಕೆಳಗೆ ಇಳೆಗೆ

" ಏನೆಷ್ಟು ಭ್ರಾಂತಿ ? ಕಾಣದೆಯೆ ಜ್ಯೋತಿ ? "

ಎಂಬರುಹು ಮೂಡಲೊಡನೆ

ಆ ಬೆಳಕ ನಂಬಿ ನಿಂದಿಹನು ಧೀರ ಎದೆ ತೆರೆದು ನಾಡ ಕರೆಗೆ

—ಡಿ. ಎಸ್. ಕರ್ಕಿ.

# ನಿಂತಿರುವರು ಗಾಂಧಿಜಿ

ನಮ್ಮ ಅಂತರಂಗದಿ
ನಿಂತಿರುವರು ಗಾಂಧಿಜಿ

೧

ಸತ್ಯದೊಂದು ದೀಪವಾಗಿ
ಕರುಣೆಯೊಂದು ರೂಪವಾಗಿ
ಶ್ರದ್ಧೆಯೊಂದು ಗೀತವಾಗಿ

ವಿಶ್ವದಂತರಂಗದಿ
ನಿಂತಿರುವರು ಗಾಂಧಿಜಿ

೨

ಮಲಿತವರೊಳಗಣ್ಣ ತೆರೆಸಿ
ದಲಿತರ ಕಂಬನಿಯನೊರಸಿ
ಘನತೆಯಲ್ಲಿ ಮನವ ನಿಲಿಸಿ

ನಿಂತಿರುವರು ಗಾಂಧಿಜಿ
ನಮ್ಮ ಅಂತರಂಗದಿ

೩

ನವರಾಷ್ಟ್ರದ ಮಾನವಾಗಿ
ಜಗದೈಕ್ಯದ ಗಾನವಾಗಿ
ತನನ ತನನ ತಾನವಾಗಿ

ಕವಿಗಳಂತರಂಗದಿ
ನಿಂತಿರುವರು ಗಾಂಧಿಜಿ

೪

ಸದಾ ಕರ್ಮಯೋಗ ನಿರತ
ಸಮದೃಷ್ಟಿಯುದಾತ್ತ ಚರಿತ
ಸಮ ಚಿತ್ತಾನಂದಭರಿತ

—ರಾಗಿ ಅಂತರಾತ್ಮದಿ
ನಿಂತಿರುವರು ಗಾಂಧಿಜಿ

೫

ಮಾನವತೆಯ ಮೇರುವಾಗಿ
ಸಜ್ಜನಿಕೆಯ ಸಾರವಾಗಿ
ಸದ್ಭಾವದ ತೀರವಾಗಿ

ಚಿತ್ತಭೂಮಿವ್ಯೋಮದಿ
ನಿಂತಿರುವರು ಗಾಂಧಿಜಿ

೬

ಧನಳ ಕೀರ್ತಿಯೊಂದು ಮೂರ್ತಿ
ಆತ್ಮ ವಿಕಸನಕ್ಕೆ ಸ್ಫೂರ್ತಿ
ನೀತಿಪಥದ ವಿಮಲಜ್ಯೋತಿ

—ಯಾಗಿ ಜಗದ ಪೀಠದಿ
ನಿಂತಿರುವರು ಗಾಂಧಿಜಿ

೭

ದಿಟವನೆಂದು ಮರೆಯದಂತೆ
ದಯವನೆಂದು ತೊರೆಯದಂತೆ
ಘನಕೆ ಮನವ ತೆರೆಯುವಂತೆ

ನಮ್ಮ ಅಂತರಂಗದಿ
ನಿತ್ಯ ನಿಲಲಿ ಗಾಂಧಿಜಿ !

—ಡಿ. ಎಸ್. ಕರ್ಕಿ

# ಗಾಂಧಿ ಯುಗ !

ನುಡಿನುಡಿಗೆ ಅಡಿಗಡಿಗೆ ಗಾಂಧಿ ಹೆಸರಿದ್ದು ನಿಲ್ಲುತಿಹುದು
ವಿಶ್ವಬಂಧು ವಿಶ್ವಾತ್ಮನೆಂದು ಜನಕೋಟಿ ನಮಿಸುತಿಹುದು;
ಲೋಕದೀಚೆ ಮುಗಿಲಂಚಿನಾಚೆ ಅವನಾತ್ಮ ತುಳುಕುತಿಹುದು
ನೇಸರುದಿಸಿ ಹೊಗಾಳಿ ಸೂಸಿ ಸಂದೇಶ ಬೀರುತಿಹವು !

ಯೇಸುಕ್ರಿಸ್ತನುತ್ತ್ರೀಮಹಸ್ತ ಸುಸ್ತ್ರೀಜವಾಂತು ಬಂತು,
ಬುದ್ಧನೆದೆಯ ಉದ್ಬುದ್ಧನೀತಿ ಹಿಂಸೆಯನು ತಳ್ಳಿ ನಿಂತು,
ಬಸವ ನಡೆದ ನುಡಿ ದಯವೆ ಧರ್ಮಗುಡಿಗಳಸವಾಗಲಿಂತು
ಗಾಂಧಿರೂಪ ಅಪರೂಪ ದೀಪ ಭಾರತವ ಬೆಳಗಿತಿಂತು !

ಜಾತಿ ಕುಲಕೆ ದುರ್ನೀತಿ ಬಲಕೆ ನೆಲೆಯಿಲ್ಲವೆಂದು ಸಾರಿ,
ದೇವಸುತನು-ಸರ್ವಾತ್ಮಕವನು ತನ್ನಂತರಂಗ ತೋರಿ,
ದೀನದಲಿತರುದ್ಧರಣ-ಹರಣ ಮುಡಿಪಿಟ್ಟು ದೇಹಕರಗಿ
ಯೋಗಿ ತ್ಯಾಗಿ!—ಮನಬುದ್ಧಿ ಮಾಗಿ ಸದಯುಗಕ್ಕೆರಗಿ ಬಾಗಿ!

'ಅವನೆ ಇಲ್ಲ ಇನ್ನುಳಿದುದಿಲ್ಲ' ಈ ಮಾತು ನಮಗೆ ಹೊಲ್ಲ;
ಅಳಿದುದಿಲ್ಲ, ಅವನಿತ್ತ ಸೊಲ್ಲ ಜಗಜೀವಿ ಜೀವಿ ಬಲ್ಲ !
ಕರುಣೆಯೊಡಲು ಹೆಗ್ಗಡಲು ತುಂಬಿದೆದೆಯಲ್ಲು ತೇಲುತಿಹನು,
ಚಿನ್ನವಾಗಿ ಮನ ಘನ್ನವಾಗಿ ಬಾಳೆಂದು ಹರಸುತಿಹನು !

ಯಾವ ಕೈಯು ಗುಂಡಿಕ್ಕಿ ಕೊಂದೆನೆನ್ನುವದು ತೆರೆದು ತೋರು
ಅದಕೆ ಕೈಯ ಮುಗಿದಿತ್ತು ಮೈಯನೆಡೆಗೊಟ್ಟ ಪಾಪಭೀರು!
ಇದ್ದರೇನೊ ಇನ್ನಿರುವರೇನೊ ಇಂತಿಂತು ಬಾಳಿದವರು ?
ಆ ಕಣ್ಣ ಕಾಂತಿ ನಗೆಮೊಗದ ಶಾಂತಿ ನಿಸ್ಸೀಮ ಪುರುಷರಿವರು!

ಕಣ್ಣೀರ ಕಣವನೊಡೆದೊಡೆದು ನೋಡು ಅಲ್ಲಲ್ಲಿ ಅವನ ನಿಲವು,
ನಿಟ್ಟುಸಿರ ತೆರೆಯ ಮರೆಯಲ್ಲಿ ನಿಂತ ಆ ಮೊಗದ ಬಲವೆ ಬಲವು!
ಜಡದ ತಿರೆಯ ಹರ್ಷಾಂತ ಝರಿಯ ನಾದದಲಿ ಅವನ ಗೆಲವು,
ನಮ್ಮ ಪಾಡು–ಬಿಡುಗಡೆಯ ಹಾಡು ಅವನಾತ್ಮ ತಳೆದ ಫಲವು!

ದಾಸ್ಯಮೊಗವ ಕಿತ್ತೊಗೆದ ಯುಗವ ನಿರ್ಮಿಸಿದ ಸಹನೆ ಬಲ್ಪು,
ಹಗೆಯುತಿದ್ದಿ ಜನಮನವ ಮಿದ್ದಿ ನವಸೃಷ್ಟಿಗೈದ ಬಾಪು !
ಹೊಸತು ಯುಗವು ಜಯ ಗಾಂಧಿ ಯುಗವು !
ಇನ್ನಾವುದಿದಕೆ ಸೊಗವು ?
ಭರತಮಾತೆ ಹೆಸರಿಡುವಳಿದಕೆ ಯುಗವಿದುವೆ
**ಗಾಂಧಿ ಯುಗವು !**

—ಚೆನ್ನವೀರ ಕಣವಿ

# ಶ್ರೀ ಶರಣ

ಅದೊ ಯಮುನಾ ತಟ
ಇದೊ ರಾಜಘಾಟ!

ಕೆಂಪು ಕೋಟೆಯ ಪೆಂಪು ಕಾಣಲಿಲ್ಲಿಲ್ಲ;
ತಾಜಮಹಲಿನ ಸಿರಿಯು ನೆನೆಯಲಿಲ್ಲಿಲ್ಲ;
'ಮೀನಾರ' ದೆತ್ತರವು ಪಿರಮಿಡಿನ ಬಿತ್ತರವು
ಆ ಅಜಂತೆಯ ಚಿತ್ರ ಮೊದಲೆ ಇಲ್ಲ;
ಗರ್ಭಗುಡಿಗೋಪುರವು
ರಂಗಮಂಟಪ ಹರಹು
ಗಂಟೆ ಜಾಗಟೆ ಪೂಜೆ ಇಲ್ಲವೇ ಇಲ್ಲ !

ಅಂದಣದ ದುಂದುಭಿಯ ರಥದ ಕಹಳೆಯ ವೇದ-
ಮಂತ್ರ ಘೋಷದ ಗರಿಮೆ ಕೇಳಿಸುವುದಿಲ್ಲ !
ಈ ಯುಗದ ಪರಮೋಚ್ಚ
ಪರಮಪಾವನ ಚರಿತ,
ಆ ಮಹಾ ಪುರುಷ ಮಲಗಿರುವನಿಲ್ಲಿ!
ಸುಭಗ ನಿರ್ಮಲವಹ ಸಮಾಧಿಯಲ್ಲಿ!

ಇರುವನಿತು ಸರಳತೆಯ ಸಿರಿಯಾಗಿ ಬಾಳಿದನು
ವಿಶ್ವಜೀವಿಗಳೆದೆಯ ಸಾಮ್ರಾಜ್ಯವಾಳಿದನು;

ನಾಡ ಪುಣ್ಯವೆ ಪುರುಷ ರೂಪಾಗಿ ನಿಂದಂತೆ
ದಿವ್ಯತೆಯೆ ದೇಹವನು ಧರಿಸಿ ಐತಂದಂತೆ
ಮಾನವ ಪ್ರೇಮವೇ ಮೈದಾಳಿ ಬಂದಂತೆ
ನಿಷ್ಕಾಮ ಕರ್ಮವೇ ಸಾಕಾರವಾದಂತೆ
ಬದುಕಿದನು ಭವ್ಯತೆಯ, ಶತ್ರುವನೆ ಪ್ರೀತಿಸುತ
ಸೇವಾ ಪ್ರದೀಪದಿಂ ನಾಲ್ದೆಸೆಯ ಬೆಳಗಿಸುತ.

ಅಧಿಕಾರ ಪದವಿಗಳು ಅಡಿಗೆರಗಿ ನಿಂದರೂ
ಕಡೆಗಣಿಸಿ ಅವುಗಳನು, ವಾರ್ಧಕ್ಯ ಬಂದರೂ
ಬಡವಗಿಂತಲು ಬಡವನಾಗಿ ಗುಡಿಸಲಿನಲ್ಲಿ
ಬಿಡುವಿರದೆ ದುಡಿದನವ ಅರ್ಧ ಬರಿಮೈಯಲ್ಲಿ
ಬಡವನಿಗೆ ಸಿಕ್ಕದಿಹ ಆಹಾರ ಔಷಧವು
ಯಾವುದೂ ಬೇಡೆಂದ ದೇವ ಮಾನವನವನು !
ನೆತ್ತರಿನ ಒತ್ತಡಕೆ ಮಣ್ಣಪಟ್ಟಿಯೆ ಮದ್ದು
ಇನ್ನುಳಿದ ಅಸ್ವಾಸ್ಥ್ಯಕೆ ಉಪವಾಸದಿಂ ತಿದ್ದು !

ಆವುದನು ಬಣ್ಣಿಸುವೆ ಮತ್ತಾವುದನು ಬಿಡುವೆ
ಅವನಡಿಯ ಹುಡಿಯಿಂದ ಮುಡಿಯಾಯ್ತು ಪೊಡವಿ;

ಇಂಥ ಸಂತರಸಂತ ಮಲಗಿರುವ ತಾಣದಲಿ
ಈ ನಿಜದ ನೆಲೆಯಲ್ಲಿ ಒಲವಿನ ನಿಧಾನದಲಿ

ಕರಗುವುದು ಮೋಡದೊಲು ಆಡಂಬರ !
ಇಳೆಯೆಗುಡಿ, ಗೋಪುರವು ನೀಲಾಂಬರ !

ಇದೊ ಯಮುನಾ ತಟ
ಇದೊ ರಾಜ ಘಾಟ !

—ಕಾವ್ಯಾನಂದ

# ಮಹಾತ್ಮಾ ಗಾಂಧಿ

ಈ ಮಹಾಸ್ವಾತಂತ್ರ್ಯ ರಣಯಾಗ ಧೂಮದಲಿ
ಸ್ಫೀತಾಗ್ನಿ ಜ್ವಾಲೆಯೊಂದುರಿಯುತಿದೆ; ನಿಶ್ಚಲಂ
ರಂಜಿಸುತ್ತಿದೆ – ಶಾಂತಿಯಲಿ ಹಿಮಮಹಾಚಲಂ

ರಾರಾಜಿಪಂತೆ ನೀಲಿಮ ನಭೋಧಾಮದಲಿ.
ಲೋಕ ಲೋಚನದಂತರಾಳದಾರಾಮದಲಿ

ವಿಶ್ವಕಂಪನಕಾರಿಯಾದ ಧರ್ಮದ ಬಲಂ
ಮೂರ್ತಿಗೊಳೆ ಮೂಡಿದೀತನು ಮಹಾತ್ಮನೆ ವಲಂ !

ಬಾಳು ಪಾವನವಾದುದೀತನಿಂ ಭೂಮಿಯಲಿ !
ಓ ಮಹಾತ್ಮನೆ, ನಿನ್ನ ಸಾನ್ನಿಧ್ಯತೀರ್ಥದಲಿ

ಮಾನವನ ಕ್ರೋಧ ಮದಮಾತ್ಸರ್ಯಗಳು ಮಿಂದು
ಪ್ರೇಮದಿ ಪುನೀತವಾಗಿಹವು! ಸುಮುಹೂರ್ತದಲಿ

ಭಾರತಾಂಬೆಯು ಸಿರಿಯಸಿರಿಸಿಂದಶ್ರೈತಂದು
ಧರ್ಮದಲಿ ನೆಚ್ಚುಗೆಡುತಿಪ್ಪ ಮಗೆ ನೀನಿತ್ತೆ,
ಪ್ರಚ್ಛನ್ನ ಕಲ್ಕಿಯೋ, ದೃಢಭಕ್ತಿಯನು ಮತ್ತೆ!

—ಕುವೆಂಪು

# ಸಭ್ಯತಾ ದೇವತೆ

(ಹರಿಜನೋದ್ಧಾರ ಕಾರ್ಯಕ್ಕಾಗಿ ಗಾಂಧಿಜಿ ಮೈಸೂರಿಗೆ ಬಂದಾಗ ರಚಿಸಿದ್ದು.)

ಮನುಜರಲಿ ದೇವತ್ವದಾಕಾಂಕ್ಷೆಯುಳಿದಿಲ್ಲ:
ಉಳಿದಿಹುದು; ದಿನದಿನಕೆ ಬೆಳೆಯುತಿದೆ; ಎಂಬುದಕೆ
ಸಾಕ್ಷಿಯಿದು: ದೆಶದೆಶ ಸಹಸ್ರ ಜನ ಕಿಕ್ಕಿರಿದು
ನೆರೆದಿಹುದು ಬಿಸಿಲಿನಲಿ ಮಾನವ ಮಹಾತ್ಮನಿಗೆ
ಗೌರವಾರಾಧನೆಯ ನೈವೇದ್ಯವನು ಸಲಿಸೆ !
ಇವನು ಕಲ್ಲನು ರೊಟ್ಟಿಮಾಡಿಲ್ಲ: ಹುಲ್ಲಿನಲಿ
ನಿಶಿತಾಸ್ತ್ರವನು ಮಂತ್ರದಿಂ ರಚಿಸಿ ದಾನವನ
ಕೊಂದಿಲ್ಲ; ಅರ್ಧನರ ಅರ್ಧಮೃಗ ರೂಪದಲಿ
ಕಂಭವನ್ನೊಡೆದು ಗುಡುಗುಡಿಸಿ ಮೂಡಿದನಿಲ್ಲ;
ದಶಶಿರನ ಕೊಂದಿಲ್ಲ; ಚಕ್ರಧರನೂ ಅಲ್ಲ.
ಅದ್ಭುತ ಪವಾಡಗಳ, ಅಘಟಿತ ವಿಚಿತ್ರಗಳ
ಗೋಜಿಗಿವನೆಂದಿಗೂ ಹೋಗುವಾತನೆ ಅಲ್ಲ !
ಮತ್ತಾವ ದೇವತ್ವದೀಕ್ಷಣೆಗೆ ನೆರೆದಿಹರ್
ಇನಿತು ಮನುವಂಶಜರ್ ?—ನೋಡಲೆಂದೆಂಬೆಯೇನ್ ?
ಆನೆಯಂಬಾರಿಗಳ ರಾಜರೈಸಿರಿಯಿಲ್ಲ;
ಇವನು ಸುಂದರನಲ್ಲ; ಯುವಕನಂತೂ ಅಲ್ಲ;

ಮುದುಕನಾಗಿಹನು; ಹಲ್ಲುಗಳುದುರಿ ಬಾಯಿ ಬರಿ
ಬೋಡಾಗಿಹುದು. ಇವಗೆ ಚೆಂದುಟಿಯು ಚೆಲುವಿಲ್ಲ;
ಕಮಲಾಕ್ಷನಿವನಲ್ಲ. ಮತ್ತೇಕೆ?—ಮೃದುಮಧುರ
ವಾಗ್ವಿಲಾಸಕೆ ಸೋತು ಎಂಬೆಯೇನ್ ? ಅದೂ ಸುಳ್ಳು !
ಇವನ ದನಿ ದೂರಕ್ಕೆ ಕೇಳಿಸದು; ಮಾತಿನಲಿ
ರಸಿಕತೆಯ ಬೆಡಗು ಬಿಂಕಗಳಿಲ್ಲ; ಓಜಸ್ಸು
ವಿನ್ಯಾಸ ವೈಖರಿಗಳಿನಿತಿಲ್ಲ; ವಿಷಯವೋ
ಬೀದಿ ಗುಡಿಸುವ ಜಾಡಮಾಲಿಗಳ ಕುರಿತದ್ದು !
ಹಿಮಗಿರಿಯ ಭವ್ಯ ಸೌಂದರ್ಯವನ್, ಗಗನವನೆ
ಚುಂಬಿಪ ತುಷಾರಮಯ ಗಿರಿ ಶಿರ ತರಂಗಗಳ
ರಮಣೀಯ ಕಮನೀಯ ಭೀಷ್ಮ ಸಂಮೋಹವನ್
ಕುರಿತವನು ನುಡಿವನಲ್ಲ. ಅಥವಾ ಸಾಗರದ
ಸುಂದರ ಸುನೀಲ ಸಲಿಲದ ನೃತ್ಯ ಮಹಿಮೆಯನ್
ಮಾತಿನಲಿ ತೋರಲೆಳಸುವ ವಾಗ್ಮಿಯಿವನಲ್ಲ.
ಚೈತ್ರವೈಶಾಖಾದಿ ಮಾಸಗಳ, ಪುಷ್ಪಗಳ,
ಪಕ್ಷಿಗಳ, ತರುಲತಾಗುಲ್ಮಗಳ, ವರ್ಷಗಳ
ಕುರಿತು ಮಂಜುಳ ಶೈಲಿಯಲಿ ವರ್ಣಿಸುವ ಸರಸ
ಕಾವ್ಯರ್ಷಿಯಿವನಲ್ಲ. ಇವನು ಹೇಳುವ ವಿಷಯ,
ಇವನ ಮೇಣ್ ಇವನ ಮಾತಿನ ತೆರದಿ, ದಿನದಿನದ
ಸರಳ ಸಾಧಾರಣದ ಬಡಹೊಟ್ಟೆ ಪಾಡಿನದು !

ಆದರೂ ದರ್ಶನಕೆ ಮುತ್ತಿಹರು ಮಾನವರು,
ಜೇನುಹುಟ್ಟಿಗೆ ಜೇನುಹುಳು ಕವಿಯುವಂದದಲಿ,
ಐಸಿರಿ ಸವಾಡ ವಾಗ್ಮಿತೆಗಳನು ಲೆಕ್ಕಿಸದೆ,

ಪ್ರೇಮ ಸತ್ಯಾಹಿಂಸೆ ಸಮತೆಗಳನಾಚರಿಸಿ,
ಬೋಧಿಸುವ, ಸಾಧಿಸುವ, ಜನರನೆಚ್ಚರಗೊಳಿಪ
ಸರಳ ಜೀವನದ ದೇವತ್ವದಾರಾಧನೆಗೆ !
ವೈಚಿತ್ರ್ಯವನೆ ದೇವರೆಂದೆಂಬುವಾ ಕಾಲ
ಒಂದಿತ್ತು. ಮತ್ಸ್ಯ ಕೂರ್ಮಾದಿ ನರಸಿಂಹರನು
ಭಯಭಕ್ತಿ ಪೂಜಿಸುವ ಕಾಲವೊಂದಿತ್ತು;
ರಾಜದರ್ಪದಲಿ, ಅಧಿಕಾರದಲಿ, ಕ್ರೌರ್ಯದಲಿ,
ಶಕ್ತಿ ಬಲ ಯುಕ್ತಿ ಸಿರಿ ಪೋಣ್ ಅಹಂಕಾರದಲಿ
ದೇವತ್ವವನು ಕಾಣುವಾ ಕಾಲವೊಂದಿತ್ತು.
ಆ ಅನಾಗರಿಕ ಮಾನವ ದೇವಭಾವಗಳ್
ಇಂದು ದೂರಾಗುತಿವೆ. ಮಾನವನ ಅಭ್ಯುದಯ
ಶ್ರೇಯಸ್ಸುಗಳಿಗಾಗಿ ನೊಂದವರ್, ಬೆಂದವರ್,
ಮನುಜರಂತೆಯೆ ಬಾಳಿ ಹೋರಾಡಿ ಸಂದವರ್,
ರಾಜ್ಯಭೋಗತ್ಯಾಗದಮಲ ವೈರಾಗಿಗಳ್,
ಮನುಜ ತನುಜರ್ ಇಂದು, ಕ್ರಿಸ್ತ ಬುದ್ಧಾದಿಗಳೆ,
ಮಾನವರ ಪೂಜೆ ಗೌರವಗಳನು ಕೈಕೊಳ್ಳ
ದೇವತೆಗಳಾಗುವಾ ಕಾಲವೈತಂದಿಹುದು.
ಋಜುದೃಷ್ಟಿ ಪೊರೆಕೊಳಲ್ ನೂರು ಯುಗಗಳ್ ಕಳೆದು
ಕಲಿಕಾಲ ಬೇಕಾಯ್ತು ! ಧನ್ಯ, ಕಲಿಯುಗ, ಧನ್ಯ !

—ಕುವೆಂಪು

# ಸ್ವಾತಂತ್ರ್ಯ ಶಿಲ್ಪಿ

ಮರೆವುದೆಂತಾ ನಮ್ಮ ಸ್ವಾತಂತ್ರ್ಯ ಶಿಲ್ಪಿಯಂ
　ದಿವ್ಯದಿನದೀ ಶುಭ ಮುಹೂರ್ತದಲ್ಲಿ ?

ಮರೆವುದೆಂತಯ್ ಭುವನ ಗೌರವ ಮಹಾತ್ಮನಂ
　ಸ್ವಾತಂತ್ರ್ಯದೀ ಸುಪ್ರಭಾತದಲ್ಲಿ ?

ಹೆಜ್ಜೆ ಹೆಜ್ಜೆಯನಿಡಿಸಿ ಕೈಹಿಡಿದು ನಡೆಗಲಿಸಿ
　ಬಿಡುಗಡೆಗೆ ತಂದ ಆ ತಂದೆಯೆಲ್ಲಿ?

ಎಲ್ಲಿ? ಓ ಆತನೆಲ್ಲಿ? ಸಿಷ್ಟ್ರವೂ ನಮ್ಮ್ರೆಪೆಸರು
　ನಂಜೀಂಟುವಾ ನೀಲಕಂಠನೆಲ್ಲಿ ?

ಜನಮನದ ಹಗೆತನದ ಘೋಷಣಾ ಬಾವಲಿ
　ಹಾಲುದಿಸಿ ಬರುವಂತೆ ಮೂಡಿ ಬಂದೆ !

ಕ್ರಿಸ್ತ ಬುದ್ಧರ ಮೈತ್ರಿಯಂ ಸಾರಿ ಸಾಧಿಸುತೆ
　ವಿಶ್ವ ಸೇವಕರ ಪಂಕ್ತಿಯಲಿ ನಿಂದೆ !

ಯಂತ್ರ ನಾಗರಿಕತೆಯ ರಾಜಕೀಯದ ಕುಟಿಲ
　ತಂತ್ರಕಧ್ಯಾತ್ಮಮಂತ್ರವನು ತಂದೆ !

ಇಂದಿನುತ್ಸವಕೆಮ್ಮನುಳಿದೆಲ್ಲಿ ಹೋದೆ, ಹೇ
ಸ್ವಾತಂತ್ರ್ಯ ಕನ್ಯೆಯಂ ಪಡೆದ ತಂದೆ ?

ಇಲ್ಲಿ ಉತ್ಸವದೊಳವನಿಲ್ಲ; ಆ ದೂರದಲಿ
ಕ್ರೋಧಕಾರ್ಪಣ್ಯ ರೋದನಗಳೊಡನೆ,

ಕೆನ್ನೀರು ಕಣ್ಣೀರುಗಳ ಹೊನಲ ಗೋಳ್ ನಡುವೆ
ದಾರಿದ್ರ್ಯದೈನ್ಯ ಧನಮದಗಳೊಡನೆ,

ವಾದಿಸುತೆ ಬೋಧಿಸುತೆ ಕರುಣೆಯಂ ಸಾಧಿಸುತೆ
ಭಕ್ತಿಯಿಂ ದೇವನಂ ಪ್ರಾರ್ಥಿಸುತ್ತೆ

ನಿರಶನ ವ್ರತನಿಷ್ಠನಾಗಿಹನು ನೋಡಲ್ಲಿ
ಧರ್ಮಶಕ್ತಿಯ ಕೃಪೆಯನರ್ಥಿಸುತ್ತೆ !

ಈಶ್ವರ ಕೃಪಾಬಲದ ಯಾಚನೆಯ ಸಲುವಾಗಿ
ಭೂಮಾತೆ ಕಳುಹಿಸಿದ ದೂತಭಿಕ್ಷು;

ಈ ಲೋಕಮಂ ಸರ್ವದೋಷಮುವಲೋಕಿಸುವ
ಆಲೋಕ ಮಹತೊಂದಶೋಕಚಕ್ಷು.

ಸೃಷ್ಟಿಕರ್ತಂ ಸೃಷ್ಟಿ ತಾನಾಗಿ ಸೃಷ್ಟಿಯೊಳೆ
ಮೂಡಿಸುತಿರ್ಪುದಕವನೆ ದಿವ್ಯಸಾಕ್ಷಿ.

ಗಾಂಧಿಯೆಂಬಾ ಹೆಸರೆ ನಾಂದಿಯಾಗಲಿ ನಮ್ಮ
ಸ್ವಾತಂತ್ರ್ಯ ಸಂಭ್ರಮಕೆ: ಹಾಡು, ಪಕ್ಷಿ !

ಜಯ್ ! ಶ್ರೀಗಾಂಧಿಗೆ ಜಯ್ !
ಜಯ್ ! ಸ್ವಾತಂತ್ರ್ಯ ಶ್ರೀ ನಾಂದಿಗೆ ಜೈ !
ಜಯ್ ! ಭಗವತ್ ಕೃಪೆಯಾ ಶ್ರೀಮತ್ ಕರುಣೆಯ
ಚಿರಬಂಧಿಗೆ ಜಯ್ !

ಜಯ್ ! ರಾಷ್ಟ್ರಧ್ವಜಕೆ !
ಜಯ್ ! ಸ್ವಾತಂತ್ರ್ಯವ ಸಾಧಿಸಿದಾ ವೀರ ಶ್ರೀಭುಜಕೆ !
ಜಯ್ ! ಸತ್ಯ ಅಹಿಂಸಾ ತ್ಯಾಗ ಸಮರ್ಪಣದಾ ಋತ
ಚಿನ್ಮಯ ನಿಜಕ !

—ಕುವೆಂಪು

# ಅಮರ ಜ್ಯೋತಿ

೧

ಶತಕೋಟಿ ಜೀವಿಗಳ ಕಣ್ಣೀರ ಧಾರೆಯೊಳು
ನನ್ನೊಂದು ಹನಿ ನಿನಗೆ ಪುಣ್ಯ ಪುರುಷ !
ನೊಂದೆದೆಯ ಗರ್ಭದೊಳು ಬಿಸಿಯುಸಿರೆ ಏಡುಕುವೊಲು
ಕಣ್ತುಂಬಿ ಸೂಸುತಿದೆ ಪುಣ್ಯಪುರುಷ !

೨

ಕೋಟಿ ಮನಗಳ ಬೆಳಗಿ ಶತಕೋಟಿ ಹೃದಯಗಳ
ಹಣತೆಯೊಳು ಚಾಚಿರುವ ಅಮರಜ್ಯೋತಿ
ಕಣ್ಣೀರ ನೇಹದೊಳು ಹಚ್ಚಿ ಸಾಸಿರ ದೀಪ
ಬೆಳಗುತಿಹುದಮಲಾತ್ಮ ದಿವ್ಯಜ್ಯೋತಿ.

೩

ಗಾಳಿಗೊಡ್ಡಿದ ಸೊಡರು ಮನೆಯ ಬೆಳಕನ್ನೆಷ್ಟು
ಕತ್ತಲೆಗೆ ಕೈದೂಡಿ ನಿಲ್ಲಬಹುದು ?
ವಿಶ್ವಕೊಡ್ಡಿದ ಸೊಡರು ನಂದೀತೆ ಹೇಳೆಷ್ಟು
ಆವ ಗಾಳಿಯು ಹೊಡೆತ ಗೆಲ್ಲಬಹುದು?

ಮನೆಯ ಬೆಳಗುವ ದೀಪವೊಂದಾರೆ ಆರಿದರೆ
ಹೃದಯ ಬೆಳಗುವ ದೀಪವಾರಬಹುದೆ ?
ಬಾಳ ಹಣತೆಯನೊಡೆದು ಬಾಳ ಕೈ ಬೀಸಿದರೆ
ವಿಶ್ವಬಾಳಿನ ದೀಪ ನಂದಬಹುದೆ ?

—ಕೃಷ್ಣಮೂರ್ತಿ ಪುರಾಣಿಕ

# ಮಹಾತ್ಮ

ನಿನ್ನ ನೆತ್ತರು ನೆಲಕೆ ಚೆಲ್ಲಿದಂದು
ಮಣ್ಣು ನಡುಗಿತು, ಹಗಲ ಹೂ ಬಾಡಿತು.
ನರನು ನರಳುವ ಹುಂಬ, ಬಾಳು ಯೂಪಸ್ತಂಭ
ಉತ್ತಮದ ಬಲಿ ಇಲ್ಲಿ—ಬಾನಾಡಿತು.
ಮನುಕುಲದ ರಕ್ತಬಿಂದು ಇತಿಹಾಸ ಕೂಗಿತ್ತು—
ನೆಲವು ನಂದನವಾಗಲೇನು ಬೇಕು ?
ತಿಳಿವು ತುಂಬಿದ ಕಣ್ಣು, ಒಲವು ತುಂಬಿದ ಎದೆಯು,
ಛಲವನರಿಯುವ ಬದುಕು—ಇಷ್ಟೆ ಸಾಕು.
ಅಂತೆ ತವಕದಿ ಬಂದೆ, ಮನದ ಮಮತೆಯ ತಂದೆ
ಹಗೆಯ ಕಾಳೋರಗವ ತಣಿಪೆನೆಂದೆ.
ಇತ್ತ ಹಾಲಾಹಲವು, ಅತ್ತ ಕೋಲಾಹಲವು—
ಅಮೃತಹಾಸನ ಬೀರಿ ನಡೆದೆ ಮುಂದೆ.

ಬತ್ತಿದೆದೆಗಳಲು ತಿಳಿವಿನ ದೀವು ಒಡೆದಿತ್ತು.
ಶಾಂತಿ ಸಮರಸಕೆ ಇದು ಮೊದಲೆನಿಸಿತು.
ಕಲ್ಲೆದೆಯು ಸೀಮೆಯಲು ಹೂ-ಕುಸುರು-ಆಹಾ ಇದು

ಬರುವ ಭಾಗ್ಯದ ಯುಗದ ತೊದಲೆನಿಸಿತು.
ನರನ ಕಾಡಿನ ನಡತೆ ಇನ್ನು ಮುಗಿದಿರಲಿಲ್ಲ—
ನಿನ್ನ ಬೇಟೆಗೆ ತಾಯಿ-ಷ್ಮಣ್ ನಡುಗಿತು.
ನರನು ಕೆರಳುವ ಹುಂಬ, ಬಾಳು ಯೂಪಸ್ತಂಭ
ಇಂಥಬಲಿ ಇನ್ನೆಷ್ಟೋ!—ಬಾನ್ ಗುಡುಗಿತು.

—ಗಂಗಾಧರ ಚಿತ್ತಾಲ

# ಮಹಾತ್ಮಗಾಂಧಿ

ಆವಾತಂ ಜೀವಿಸಿರಲ್ ।
ಜೀವಿತಮೆಮಗಾದರಾರ್ಹಮೆಸಿಸಿತೊ ಅವಸಂ ॥
ದೈವವೆ ಕಸಿದೊಯ್ದಿರಲೀ ।
ಭೂವಲಯದೊಳಿನ್ನದೆತ್ತ ಸತ್ತ್ವಕೆ ಶರಣಂ ॥ ೧ ॥

ಜೀವಿಸಿಯೆ ಮುಕ್ತನಾಗಿ ।
ರ್ದಾ ವಿಶ್ವಾತ್ಮೈಕ್ಯ ಸಂಸ್ಥಿತಂಗೇಂ ಮರಣಂ ॥
ದೀವಿಗೆ ನೊಂದಿದ ಮನೆಯಾ ।
ಬೇವಸಮಿನ್ನಲ್ತೆ ನಮಗೆ ಕಾಡಿನ ನಿಶಿಯೊಳ್ ॥ ೨ ॥

ನರವೃತ್ತದ ವಿಸ್ತರದೊಳ್ ।
ನಿರುಪಮಮೀ ಗಾಂಧಿ ಸಾಧು ವಿಜಯಾಖ್ಯಾನಂ ॥
ಚಿರಮಾ ವಿಭೂತಿ ಮಹಿಮಾ ।
ಸ್ಮರಣೆಯೆ ನಮಗಿರ್ಪ ಸರ್ವ ರಕ್ಷಾ ಕವಚಂ ॥ ೩ ॥

ಭಾರತಕುಲ ತಾತಪದಂ ।
ಧಾರಿಣಿಯಾ ಸಕಲ ಕುಲ ಸಮಷ್ಟಿಯ ಮುಕುಟಂ ॥
ಶ್ರೀರಾಮರಾಜ್ಯವಿಹರಂ ।
ಪೌರುಷ ಸೌಜನ್ಯ ವೃದ್ಧಿಸೀಮಾಶಿಖರಂ ॥ ೪ ॥

ಹಿಮಶೈಲೋನ್ನತನಚಲಂ ।
ಶಮದೊಳ್ ಸತ್ಯೈಕನಿಷ್ಠೆಯೊಳ್ ಸಂಯಮದೊಳ್ ॥
ಮಮತಾ ನಿರ್ಮೂಲನದೊಳ್ ।
ಸಮದರ್ಶನದೊಳ್ ಸಮಷ್ಟಿಶುಭವೀಕ್ಷಣೆಯೊಳ್ ॥ ೫ ॥

ನರಮಾತ್ರನಲ್ತು ಲೋಕೋ ।
ತ್ತರವೆಸಗಲ್ ಬಂದ ವಜ್ರಹಸ್ತಂ ನಿಸ್ಸ್ವ ॥
ಜ್ವರಿಯಿಂ ಜಾಲಿಸಿ ಜನತೆಯ ।
ಮೆರೆಯಿಸಿದನದೊಂದಪೂರ್ವ ತೇಜೋದ್ಭುತಮಂ ॥ ೬ ॥

ಚೇತನ ಕುಸುಮ ವಿಕಾಸಂ ।
ಸ್ವಾತಂತ್ರ್ಯ ರವಿಪ್ರಕಾಶದಿಂದೆಸುತೀತಂ ॥
ನಾತತ್ಯದ ತಪದಿಂ ವಿ ।
ಖ್ಯಾತಕ್ರಿಯಸಾದನಾ ಭಗೀರಥ ಸದೃಶಂ ॥ ೭ ॥

ಪರತಂತ್ರದ ಮುರಿಯಲವಂ ।
ನಿರವಿಸಿದನದೊಂದಪೂರ್ವ ಸಾತ್ತ್ವಿಕ ಬಲಮಂ ॥
ಪುರುಷತೆಯಂ ಕ್ಲೀಬರ್ಗ ।
ತ್ತರುಧಿರ ರಣದಿಂ ಪ್ರಜಾಸ್ವರಾಜ್ಯದ ತಂದಂ ॥ ೮ ॥

ಪಂಚಮಹಾಭೂತಂಗಳ ।
ಸಂಚಿನೊಳಿನ್ನೊಂದು ಷಷ್ಠತತ್ತ್ವಂ ಕೂಡಲ್ ॥
ಮಿಂಚಹುದು ನರನ ಬರಿಬಾಳ್ ।
ಚಂಚುರದಾ ತತ್ತ್ವಮಾತ್ಮವೆಂದೊರೆದನವಂ ॥ ೯ ॥

ಆ ಶುದ್ಧಾತ್ಮದ ಬಲವೋ |
ಪ್ರೈತಿಷ್ಠ್ಯಂ ದೃಢವಿವೇಕಿಯು ವ್ಯವಹೃತಿಯೊಳ್ ||
ಆಶೆಯುದೊಂದೇ ಕಲಹಾ |
ವೇಶಗಳೊಳ್ ಮನುಜನುಳಿವಿಗೆಂದೊರೆದನವಂ || ೧೦ ||

ಅಂತಸ್ಸತ್ತ್ವೋನ್ನತಿಯುನೆ |
ಸಂತತದಾತ್ಮೀಯ ಶುದ್ಧಿಯಿನೆ ಸತ್ಯದಿನೇ ||
ಶಾಂತಿಪ್ರತದಿನೆ ನೋಡರ |
ಸಾಂತ್ವನದಿನೆ ಸಿದ್ಧಿಯೊಂದು ಸಾರಿದನಾತಂ || ೧೧ ||

ಹಿಂದುವದಾರ್ ಮುಸ್ಲಿಮನಾರ್ |
ಸಂದೀಯುರ್ ಸಿಕ್ಖ ಕ್ರಿಸ್ತ ಸಾರೋಕ್ಷ್ಟ್ರಿಯರಾರ್ ||
ಒಂದೇ ನೆಲಸೊರ್ವನೆ ವಿಭು |
ಸಾವಿಹುದೊಂದೇ ಚರಿತ್ರೆ ಹಿಂದುಂ ಮುಂದುಂ || ೧೨ ||

ಬಲವೈಕಮತ್ಯವೆಂಬುದ |
ಕಲಿಸಲವಂ ತನ್ನ ತಾನೆ ಬಲಿಯಾಗಿಸಿದಂ ||
ತಲೆಯೆತ್ತೀ ನಾಡ ಜನಂ |
ನಿಲುವವೊಲವನಿತ್ತನಾತ್ಮ ಗೌರವ ವರಮಂ || ೧೩ ||

ಜನಪದ ಪಾತಕ ಭಾರವ |
ನನುಕಂಪಾಭರದಿ ತನ್ನದೆನುವೊಲ್ ತಳೆಯು ||
ತ್ತನುಭವಿಸಿದ ಸ್ವಶಿಕ್ಷೆಯಿ |
ನನುನಯಿಸಿದನೆಮ್ಮನ್ ಆತ್ಮಪರಿಶೋಧನೆಯೊಳ್ || ೧೪ ||

ಮನೆಮನೆಯೊಳಮಾಬಾಲಕ ।
ಜನದೊಳದೋರೊರ್ವನಂತರಂಗಮನುಮುದಾರ್ ॥
ವಿನಯು ಸ್ಪರ್ಶನದಿಂ ಪಾ ।
ವನಗೊಳಿಸಿದರಿಪನಂತೆ ಲೋಕಸಖ್ಯದ ಕಥೆಯೊಳ್ ॥ ೧೫ ॥

ಲೋಕ ಸಮಸ್ತದಿ ಧರ್ಮ ।
ಕ್ಕೇಕಾಶ್ರಯನಾದನೀತನಿವನಿಲ್ಲದಿರಲ್ ॥
ಕಾಕೋಲೂಕಿಕ ಸಮರ ।
ವ್ಯಾಕುಲವಿಂದಾಗದಿಹುದೆ ಜನಪದ ರಂಗಂ ॥ ೧೬ ॥

ಧರ್ಮವೆ ಸಕಲ ಶರಣ್ಯಂ
ನಿರ್ಮಮಸುಖಮದುವೆ ತಾನನಾಸಕ್ತಧನಂ ॥
ಕರ್ಮಾಯತಿಯೆಂತಿರೆಯುಂ ।
ಧರ್ಮವೆ ವರಲಾಭವೆಂಬರಿನ್ನಾರಿಳೆಯೊಳ್ ॥ ೧೭ ॥

ಜಗಮೀಶವಾಸಮದರಿಂ ।
ವಿಗತಾಹಂತೆಯಲಿ ವಿಶ್ವಜೀವನದೊಳ್ ತಾಂ ॥
ಪುಗುತಾತ್ಮವ ವಿಸ್ತರಿಸಲ್ ।
ಭಗವದ್ದರ್ಶನಮದೆಂದು ಬಾಳ್ದವನಾತಂ ॥ ೧೮ ॥

ಪಾರುವುವೆಲ್ಲಂ ಜಗದೊಳ್ ।
ಜಾರದೆ ನಿಂದಿಹುವೆ ರಾಜಕೀಯದಿ ಬೆಲೆಗಳ್ ॥
ಪೌರುಷಕೆಂದುಂ ಬೆಲೆಯುಹ ।
ಸಾರಾರ್ಥವ ಪಿಡಿದು ಜಗಕೆ ತೋರ್ದವನೀತಂ ॥ ೧೯ ॥

ಪೌಲಿಳಿ ಸತ್ಯಂ ದೇವಂ ।
ಬಾಳಿಳ್ಳಂ ದೇವ ನಿತ್ಯಲೀಲಾ ವಿಭವಂ ॥
ಬಲಗಿಪ್ರೊಡೆ ದೇವನ ಸಿ ।
ನಾ ಲೋಕವ ಕೆಂಗಸಗೊಳಿಪುದೆಂದವನೀಕ್ಷ ॥ ೨೦ ॥

ಜೈವಕ್ರದ್ಧಾಧಾರಂ ।
ಜೀವಿತರಸವತ್ಕಸಿಕ್ತ್ವಧಾರಾಕಸರಂ ॥
ಭೂವಿಸ್ತರ ಸಂಸಾರಂ ।
ಕೈವಲ್ಯಪಥ ಪ್ರದೀಪ ಚರಿತೋದಾರಂ ॥ ೨೧ ॥

ಮನುಜಾತ್ಮ ಜ್ಯೋತಿಯುವಂ ।
ಮುನಿ ಋಷಿ ತಪಸಿ ಪ್ರಸಾದಿತ ಸ್ಫೂರ್ತಿಯುವಂ ॥
ಜನ ಹೃತ್ಪ್ರಸವಮೂರ್ತಿಯುವಂ ।
ಅನವಧಿ ಜಗದಂತರಾತ್ಮವಿಭು ಸಾಕ್ಷಿಯುವಂ ॥ ೨೨ ॥

ಈಶ್ವರ ಪದದಿಂ ಬಂದಾ ।
ಭಾಸ್ವರ ಕಲೆ ಮರಳಿ ಸೇರ್ವುದಾ ಸನ್ನಿಧಿಯಂ ॥
ಶಾಶ್ವತಮೆಮ್ಮೊಳ್ ನಿಲುಗಾ ।
ವಿಶ್ವಪ್ರೀತಿಯು ವಿಶಾಲ ನೀತಿಯು ವಿಭವಂ ॥ ೨೩ ॥

ಆಗಾಗಳಾನುಮಾ ಗುರು ।
ವಾಗಸದಿಂದೆಮಗೆ ತೋರನೇಂ ಕೆಳೆನಗುವಂ ।
ತ್ಯಾಗವ ತೋರ್ಪವೆ ಸತತೋ ।
ದ್ಯೋಗವ ನಾಂ ಬಂಧುಯೋಗವಂ ಮೆಚ್ಚುಹವೋಲ್ ॥ ೨೪ ॥

—ಡಿ. ವಿ. ಜಿ.

# ಸಾಧು ಗಾಂಧಿ

ಇಂದ್ರಿಯಂಗಳ ಜಯಿಸಿ ಚಿತ್ತಶುದ್ಧಿಯ ಬಯಸಿ
ಲೋಭವಂ ತ್ಯಜಿಸಿ ರೋಷವ ವರ್ಜಿಸಿ ।
ಸರ್ವಸಖ್ಯವ ಭಜಿಸಿ ತೃಪ್ತಿಯನಪ್ಪಿಸಿ
ಸತ್ಯಪಾಲನೆಯೊಂದ ಮನದೊಳಿರಿಸಿ ।
ಕಾಯಕಷ್ಟವ ಸಹಿಸಿ ವೈರಿಗಣವಂ ಕ್ಷಮಿಸಿ
ಸರ್ವಸಮತೆಯ ಗಳಿಸಿ ಶಮವನರಸಿ ।
ಸ್ವಾತ್ಮಶಿಕ್ಷಣವೇ ಸ್ವರಾಜ್ಯವೆನ್ನುತ ಪಠಿಸಿ
ದೇಶಸೇವೆಯನೀಶಸೇವೆಯೆನಿಸಿ ॥
ಸಾಧುವರವೃತ್ತಿಯಂ ತನ್ನೊಳೇ ಜಗಕೆ ತೋರಿ
ಐಹಿಕಾರ್ಥಂಗಳಾನರ್ಥ್ಯವಂ ವಿಶದಬಡಿಸಿ ।
ಪಾಶ್ಚಾತ್ಯ ಜನಕಮತಿ ವಿಮಲ ನೀತಿಯನು ಪೇಳ್ವ
ದೈವ ಸಂಪನ್ಮಾರ್ಗದರ್ಶಕಂ ಗಾಂಧಿಯಲ್ತೆ ॥

—ಡಿ. ವಿ. ಜಿ.

# ನಕ್ಕ ನಾ ತಾತ

ಅಕ್ಷಯ  ಪಾತ್ರದಿ ಕಾಮಧೇನುವಿನ
ಸುಧೆಯ ಹಾಲು ಕರೆದು

ಲಕ್ಷ್ಮೀದೇವಿಯೇ ವರದ ಹಸ್ತದಿಂ
ಕಲ್ಪವೃಕ್ಷಕೆರೆದು

ಧ್ರುವದ ಬೆಳಕಿನಲಿ ಅರಳಿಸಿದಳು ಈ
ನಿತ್ಯ ಪುಷ್ಪ ಮುಕುಲ

ಭುವನ ಮಂಗಲಕೆ ಇದುವೆ ಮುಂಗುರುಹು
ಬಾಪು ನಗಲು ವಿಮಲ !

*   *   *

ಆ—ಸುಜಾತೆ ಗ್ರಾಮೀಣ ಮುಗುದೆ ತಂ
ದುಣಿಸೆ ಪಾಯಸಾನ್ನ

ಬೋಧಿ ವೃಕ್ಷದಡಿ ಬೆಳಗಿತಂದು ಸ್ಮಿತ
ವಜ್ರ-ಕುಸುಮ ಚೆನ್ನ

ತಾಯ ಮಡಿಲ ಮೊಲೆಯುಂಡು ಬಾಯ್ಮುಗುಳ
ಬಿರಿವ ಹಾಸ್ಯ ಕಾಂತಿ

ಹಾಲಗಡಲ ತುಂತುರದಿ ತೊಳೆದ ಶುಚಿ
ಸದಾನಂದ ಕಾಂತಿ

ಉಭಯ ಅಭಯ ಚಿನ್ಮುದ್ರೆ ಬಿಂಬಿಸಿದ
ಅನಘ ಅನರ್ಘ ಪ್ರಭ
ಉದಯವಾಯ್ತು ಪೂರ್ಣಾವತಾರದಲಿ
ಬಾಪು ನಕ್ಷ ಶೋಭೆ !

—ಗೌರೀಶ ಕಾಯ್ಕಿಣಿ

# ಅಮರ ಜನ್ಮ

ಅವನೆಲುಬ ಬೂದಿ ಗುರು ಶುಕ್ರ ಶೋಣಿತದಲ್ಲಿ ಕರಗಿತು ಅರೆ
ಆದರೂ

ಕಚದೇವ ಕಾಯ ತಳೆದಿದ್ದ
ಅಮೃತ ಮಂತ್ರವ ಪಡೆದು ಮತ್ತೆ ಹೊರಬಿದ್ದ
ದೇವಯಾನಿಯ ಕಳೆದುಕೊಂಡ ಕೈಯಲ್ಲಿ
ಸ್ವಜನರುದ್ಧಾರಕ್ಕೆ ಸಂಜೀವಿನಿಯ ಗೆದ್ದ.

ಈ ಅಮೃತ ಪುತ್ರನೋ !
ಜೀವದ ವಿರಾಟ್ ಕಾಯಕ್ಕೆ [illegible]
ತನ್ನ ಬಾಳನೆ ತಳೆದು ಸಂಜೀವನವಗೈದ.
–ದೇವಯಾನವ ಕಳೆದುಕೊಂಡ ಜನಪಿಂಡ
ಲಕ್ಷೋಪಲಕ್ಷ ಕಚಪಕ್ಷ ಕಾಯಗಳೊಳಗೆ
ಸಾಕ್ಷಿ ಒಳದನಿಯಾಗಿ ಗುರುವಿನ [illegible] !

\+ \+ \+

ಈತ ಹುಟ್ಟಿದ ದಿನವೆ ಸತ್ತಿತು ಗುಲಾಮಮಾನ
ಈತ ಸತ್ತಾಕ್ಷಣವೆ ಹುಟ್ಟಿತು ಮಹಾತ್ಮತನ.
ಮೋಹಾತ್ಮ ಗುಂಡಿಟ್ಟ ಈ ಮಹಾತ್ಮನ
ಚಿತಾಭಸ್ಮವೋ ! ನಾಡನಾಡಿಗಳಲ್ಲಿ

ಹರಿದು ನೀಲವಾಯ್ತು
ಕೆಸರಾಗಿ ಹಸಿರಾಗಿ ಹೆಸರಾಗಿ ಹೋಯ್ತು—
ಇಲ್ಲಿಲ್ಲ, ಹೋಗಿಲ್ಲ; ಉಸಿರ ಉಸಿರಾಯ್ತು !

* * *

ಓ, ಗಾಂಧಿ ! ಸುರಸಗಂಧಿ !
ನಮ್ಮ ನವನಿರ್ಮಿತಿಗೆ ನೀನೆ ನಾಂದಿ !
ನಾಂದಿಯೋ ಆಯಿತೋ ಭರತವಾಕ್ಯ ?
ಹೋಳಿಯಿಂದೆ ಯುಗಾದಿ---ದೃಷ್ಟಿ ಮುಖ್ಯ.
ಅಂದು ಸೇವಾಗ್ರಾಮ !
ಪಡಿನುಡಿದ "ರಘುರಾಮ" !
ಮಂದ್ರ ಮಿಡಿದಿದೆ ಷಡ್ಜ
ರಾಷ್ಟ್ರಗೀತಕೆ ಸಹಜ
"ಪತನ ಅಭ್ಯುದಯ ಬಂಧುರಮಾರ್ಗೇ
ಯುಗಯುಗ ಧಾವತ ಯಾತ್ರಿ"
"ಅಯಿ ಚಿರಸಾರಥಿ ! ತವರಥಚಕ್ರೇ
ಮುಖರಿತ ಪಥದಿನರಾತ್ರಿ"
ನಿನ್ನ ಮನೋರಥದ ಚರಖ
ಅಕ್ಷಯಾಂಬರ ಹೊಸೆಯೆ ನೂತ ಮಂಗಲ ಸೂತ್ರ
ಭಾರತಕೆ ಸೌಭಾಗ್ಯ ನೂತನ ಸುಸೂತ್ರ !

* * *

ಕತ್ತೆಗೂ ಬಂದಿತ್ತು ಪರ್ವಕಾಲ
ಕ್ರೈಸ್ತ ಭಗವಂತನದನೇರಿದಾಗ

ತಾನೇನು ಹೊತ್ತ
ಅವಕೇನು ಗೊತ್ತೇ ?
ಆತನೇರಿದ ಶಿಲುಬೆ
—ಮಾನ[illegible]ಯ ಎಲುಂಬೆ !
ಮೋಹಕ್ಕೆ ಜನವನ್ನು
ತಪಕ್ಕೆ ಸತ್ಯವನು
ಜೊತೆಂಗೆ ಆ ಧಾರಿ
ಎತ್ತಿ ಡಾಳಿಸು ತೋರಿ
ವಜ್ರ ಧ್ರುವತಾರೆ,
ಬಾಪೂಜಿ ಬೇರೇ !

*　　　*　　　*

ರಾಮನಾಮಕೆ ಬಂಡೆ ತೇಲಿತಂತೆ
ರಾಮನಾಮವಸ್ತ್ರದ ನಿನ್ನ ಚರಿತೆ
ಜಡಕೆ ಜೀವೋತ್ಕರ್ಷ
ಅದರ ಒಡನಾದರ್ಶ

ನಿನ್ನ ಚರಿತೆ

ನಿನ್ನ ನಾಮದ ಬಲವು ಒಂದೆ ಸಾಕು
ಸರಕಾರ ಅಧಿಕಾರ ಬರಿವರೇಕು
ನೀನು ಮೆಟ್ಟಿದ ಹರಳು ಇಂದು ಭಾರತರತ್ನ
ನೀನು ಮೆಟ್ಟಿದ ಮಳಲು ದಿವ್ಯ ಯಾತ್ರಾ ಕ್ಷೇತ್ರ
ನೀನು ಮುಟ್ಟಿದ ಆಡು
ಏನು ಆನೆಗೆ ಪಾಡು ?
ಮಣ್ಣಗೊಂಬೆಗಳನ್ನೆ ಮಂತ್ರಿಸಿ ಮಹಾರಥಿ
ಗಳಾಗಿಸುವ ಶಕಕರ್ತ ಶಾಲಿವಾಹನ ನೀನು

ಸ್ವನಿಷ್ಠೈಹಜ್ಜೆಗೊಂಡಿತಿಹಾಸ, ಇನ್ನೇನು ?

ನಿನ್ನ ಋಜುವಿಂದು ಉಸಿರು
ಮೊರೆದ ಬಿರುಗಾಳಿ ಸುಳಿಗೆದ್ದೇರಿ
ಸೂರ್ಯ ಮಂಡಳ ಸನಿಯ ಸೇರಿ
ಹಾರಾಡಿ ಮೆರೆಯಿತೋ
ಗರುಡ ಗರುವಾಯುಯಪಿ
ಧೂಳಿ, ಕಣ, ಕಸ, ಕಡ್ಡಿ
ತರಗೆಲೆಯು, ಒಮ್ಮೆ
ಆ ಗಾಳಿ ಇಂದಿಲ್ಲ, ಅವೂ ಇನ್ನು ಇಳಿದಿಲ್ಲ !
ಆವೇಗದಾವೇಗ ಬೇಕೆಮಗೆ ಬೇಕಯ್ಯ
ನಿನ್ನಾ ಮನೋರಥವ ತೀರ್ಗಡೆಗೆ ತಲ್ಪಿಸಲು
ಏನಹುದು ಜಲ್ಪಿಸಲು ?

"ಅಣೋರಣೀಯಾನ್ ಮಹತೋ ಮಹೀಯಾನ್"
—ತತ್ವವಾಯಿತು ಸತ್ವ; ಇದುವೆ "ತತ್-ಸತ್" ಮಂತ್ರ
-ದಾತ್ಮ ಸಾಕ್ಷಾತ್ಕಾರ !
ರಾಜಘಾಟಿಕೆ ಹಾರ
ಪ್ರತಿಮೆಗಳ ಭೂಭಾರ
ಸಾಹಿತ್ಯ-ಸಂಭಾರ ಏನಿದ್ದರೇನು ?
ಹದಿನಾರು ಸಿಂಗಾರ ಹೆಣಕೆ ಬೇಕೇನು ?

* * *

" Where the mind is without fear
Where the head is held high "
ಸ್ವಾತಂತ್ರ್ಯ ಸ್ವರ್ಗವಿದು ಭಯವಿರದ ಮಾರ್ಗ

ಸೇವೆ–ಸರಳತೆ–ಸಮತೆ ದಯೆಗೊಡೆದ ದುರ್ಗ
ಸವಿನಯ ವಿರೋಧನೆಯ ಆತ್ಮಾಭಿಮಾನ
ಗುರಿಯಲ್ಲ, ದಾರಿಯೇ ಹಿರಿದೆಂಬ ಹವನ
ದಿಟ್ಟದಿಟ ದಿಟ್ಟಿಯಲಿ ದಟ್ಟಡಿಯ ಪಯಣ
ನೀನಿತ್ತ ಈ ನಡೆಗೆ ಕಲ್ಲಿದೆಯು ಮಯಣ !

ನಿಜವ ಕಂಡವರಿಹರು
ನಿಜಕಾಣುವಂತಿಹುದು.
ನಿಜವ ಕಂಡಿಹೆನೆಂಬ
ಕಣ್ಣಜಂಭವಿದಲ್ಲ
ಎಂಬುದನೆ ನಂಬಿಸಿದೆ, ಬಲ್ಲವನೆ ಬಲ್ಲ !
ಒಂದು ಮನ್ವಂತರದ ಭವ್ಯ ನಾಡಿಸ್ಪಂದ
ಟಿಕ್ ಟಿಕಿಸಿ ಅಳೆದಿತ್ತು ನಿನ್ನ ನಡು–ಗಡಿಯಾರ
ಗಡಿಯಾರ ನಿಂತಿಹುದು
ಸ್ಪಂದ ನಂದದೆ ಇಹುದು
ಗಾಂಧೀಜಯಂತಿಯಿದು ಅಮರ ಜನ್ಮ
ದೇಶಕಾಲಾತೀತನಾದನೀತ ಪುನೀತ
ದೇಹ–ದಶೆ ಕಳಚಿದ್ದ ಮಾಹಾತ್ಮ ರೂಪ
ಹಿರಿಜೀವ ಮರೆಯಾಗೆ ವಿಶ್ವವೇ ಸ್ತೂಪ
ಕಾಮವಿರದ ಅನಂಗ
ಈ ಯುಗದ ಅದ್ಭುತವು
ಗಾಂಧಿಯೆಂಬ ಪ್ರಭಾವ
ನಮ ನಿಮಗೆ ಹೃದ್ಗತವು

ಅಣುಬಾಂಬು ತೃಣವೆಂಬ
ಜನದಂತರಾತ್ಮನ್
ವಂದೇ ಮಹಾತ್ಮನ್

-ಗೌರೀಶ ಕಾಯ್ಕಿಣಿ

# ಜನವರಿ ಮೂವತ್ತು

ಮೌನ-ಮೇಘದ ಮುಸುಕು ಜಗಕೆಲ್ಲ ಬಿದ್ದಿತ್ತು
  ಗಾಳಿ ತಟ್ಟನೆ ತಡೆದು ನಿಂತುಬಿಟ್ಟಂತೆ;
ಸಂಸಾರ ಸರ್ಪದೊಲು ಸುತ್ತಿಸುತ್ತಿ ತಿರುಗುತ್ತ
  ಸೃಷ್ಟಿಕರ್ತನ ಒಡಲ ಹುತ್ತ ಹೊಕ್ಕಂತೆ.
ಜಗದ ಕೊನೆಯಂಚಿಗೇ ಬಂದು ಸೇರಿ
  ನಿಂತವೊಲು ಪಥಿಕ ಹೆಜ್ಜೆಗೇ ಹೆದರಿ || ೧ ||

ಚಿಕ್ಕೆ ಬಾನಂಗಳದಿ ಮೈಸುಟ್ಟುಕೊಂಡಿತ್ತು
  ಕಾಳರಾತ್ರಿಯೊಳ್ಲೀನವಾಯ್ತು ಜಗವು
ಕಾಲವ್ಯಾಧನು ಬಿಟ್ಟ ಮೃತ್ಯುಬಾಣದ ಗುರಿಗೆ
  ರಕ್ತಸಿಂಚಿತವಾಯ್ತು ಸೃಷ್ಟಿಮುಖವು
ನೂರು ದನಿ ಚೀರಿದವು ಅದನು ನೋಡಿ
  ನೂರು ಎದೆ ನರಳಿದವು ಅದರ ಜೋಡಿ || ೨ ||

ಸತ್ಯದರ್ಪಣ ಒಡೆದ; ಸ್ವಾತಂತ್ರ್ಯ ಸಿರಿಗೈಯ
  ಹೊಳೆವ ಖಡ್ಗವು ಬಿತ್ತು ಚೂರಾಗಿ
ಜಗದ ಸುಖದುಃಖಗಳ ಉಸಿರೊಳೊಂದಾಗಿಸಿದ
  ಆತ್ಮಪ್ರಭೆ ಬಾಡಿತ್ತು, ಮಬ್ಬು ಮಂಕಾಗಿ.
ನಿರ್ಲಿಪ್ತ ಪಂಕಜವು, ನಿಶ್ಚಲದ ದೀಪ !
  ಯಾವ ಕೈ ಕೆಡಿಸಿತ್ತೊ ಈ ನಿರುಪಮ ರೂಪ ! || ೩ ||

ದೇವಶಕ್ತಿಯ ಕೇಂದ್ರದಿಂದ ಪ್ರಾಣವ ಪಡೆದು
ಬಾಳುವೆಯ ನೆವದಲ್ಲಿ ಪ್ರಾರ್ಥನೆಯ ಸಲಿಸಿ
ಜೀವಿತದ ಹೋರಾಟ ಅವನ ಸೇವೆಯೆ ಎಂದು
ಬಿದ್ದ ಆಗಲು ಅವನ ಹೆಸರನ್ನು ನಿಲಿಸಿ
ಬಿದ್ದ ಯೇಸುವು, ಇಂಥ ಯುಗದ ಗ್ಲಾನಿಯಲಿ
ಕಂಡು ದೈವದ ಸೂತ್ರ ಧರ್ಮ ಪತನದಲಿ ॥ ೪ ॥

ಇವನ ಕೊಂದಾ ಕೈಯು ಬಾಳನುಣ್ಣುವುದೆಂತು ?
ಕೈಯ ಹೊಲೆ ವೈಲಿಗೆಯ ಕಳೆವುದೆಂತು ?
ಮಡದಿಮಕ್ಕಳಗಲ್ಲ ನೇವರಿಸಬಹುದೆಂತು ?
ಬೆಳೆವಬಾಳಿಗೆ ಹರಕೆಯೀವುದೆಂತು ?
ದೇವಕೃಪೆ ಬೇಡುತ್ತ ಕಾಯ್ವುದೆಂತು ?
ಕ್ಷಮ್ಯವಾದರು ಕೂಡ ಬಾಳ್ವುದೆಂತು ? ॥ ೫ ॥

ಮಂಜುಗಟ್ಟಿದ ಪಾಪ, ಪರಿತಾಪವೇನಿದಕೆ ?
ಚಿತೆಯ ಬೆಂಕಿಗೆ ಬೇಯದಂಥ ಕರುಳು
ತಾಳಿಕೊಳ್ಳುವದೆಂತು ಬಿದ್ದಿರಲು ಮೈಮೇಲೆ
ಜಗವ ಕಂಗೆಡಿಸುವೀ ಕಪ್ಪು ನೆರಳು ?
ಕರುಣೆಯೆಂಬುದ ಕಲಿಯದಂಥ ಜೀವ
ಅರಿತಿರಲು ಬಿಸುಡಬಹುದಿತ್ತು ಸಾಪ ! ॥ ೬ ॥

ಆದರೂ ಬದುಕಿರಲಿ; ಹಾಳಾದ ಮರುಭೂಮಿ,
ಕಡಲಕೋನೆ ತೀರಗಳ ತುಳಿಯುತಿರಲಿ
'ಕೇನ' ನಾಗುತ ಕೊಲೆಯ ಸುಖವದೇನೆಂಬುದನು
ಕೊಲೆಗಡಕ ಹೃದಯಕ್ಕೆ ಕೇಳುತಿರಲಿ
ಗಾಳಿಮಳೆಗಳಿಗೆಲ್ಲ ಅರಚುತಿರಲಿ
ತನ್ನ ಹೆಮ್ಮೆಯನಲ್ಲಿ ಕೊಚ್ಚುತಿರಲಿ! ॥ ೭ ॥

ಹೌದು, ಅವ ಬದುಕಿರಲಿ, ನಮ್ಮ ಒಡಹುಟ್ಟಿದವ
ಕೊಲೆಗಡಕನಾದರೂ ನಮ್ಮ ಬಂಧು
ಕುಲದ ಕೆನ್ನೀರಿನ ಕಲಮಲವನೆಬ್ಬಿಸಿದ
–ನೆಂದು ಬಲ್ಲರು ಅಣ್ಣ ತಮ್ಮದಿರಿಂದು
ನಮ್ಮ ಪುಣ್ಯದ ತಲೆಗು ಬಂತು ಆ ಪಾಪ
ನಮ್ಮ ಎದೆಗಳಿಗೆಲ್ಲ ಇಹುದು ಪರಿತಾಪ || ೮ ||

ಯುಗಯುಗದ ನಿಗಳಗಳು ಕಳಚಿಬಿದ್ದವು ತಂದೆ !
ಬಂಧ ಮುಕ್ತಿಯ ಹಿಗ್ಗು ತುಂಬುತಿಹುದು
ನಾಡ ತಂದೆಯದಾಗಿ, ಆರ್ತರಿಗೆ ಸಖನಾಗಿ
ನಿನ್ನ ಪುಣ್ಯವೆ ನಾಡ ಕಾಯುತಿಹುದು
ನಿನ್ನ ಬಲಿದಾನವೇ ಹರಕೆಯಾಗಿರಲಿ!
ನಿನ್ನ ಕನಸಿಗೆ ನಾಡು ಹದವಾಗಿ ಬರಲಿ! || ೯ ||

ವ್ಯಕ್ತರೂಪದಿ ಹೊಳೆದು ಅವ್ಯಕ್ತವಾಗಿರುವ
ಅರಿವಿನಾಚೆಗೆ ನಿಂತ ನಿಲವೆ ಒಲವೆ,
ವೈಯ ಸಿಪ್ಪೆಯ ಕಳೆದುಕೊಂಡ ಕರುಣೆಯ ತಿರುಳೆ,
ನಮ್ಮ ತಿರುಳನು ಮುಟ್ಟಿ ದಿವ್ಯಬಲವೆ,
ನಿನ್ನ ನಗೆಯೊಳು ಭುವನ ದೀಪ್ತವಾಗಿರಲಿ
ಚರಖಚಕ್ರದ ಹಾಗೆ ತಿರುಗುತಿರಲಿ !! || ೧೦ ||

ಮೂಲ : ಅರ್ಮಾಂಡೋ ಮೆನೆಝೆಸ್
ಅನು : ಕೀರ್ತಿನಾಥ ಕುರ್ತಕೋಟಿ

# ನಮ್ಮ ಬಾಪೂ

ಒಂದೆ ಹಿಡಿಮೂಳೆ ಚಕ್ಕಳ ಅಷ್ಟೆ; ಅದಕೆ ಸುರಿ
ಮೂರುನಾಲ್ಕೋ ಚಮಚ ರಕ್ತ, ಮಾಂಸ; ಜೊತೆಗಿರಿಸು
ಪಾಪವಂ ನೆರೆತೊರೆದ ಕಡಲಿನಾಳದ ಮನಸ,
ನೆರೆಬಂದ ಕಡಲಿನೊಲ್ ಪ್ರೇಮವಂ ತುಂಬಿದೆಸೆಯ;
ಹಚ್ಚು-ಮೊರಕಿವಿಯೆರಡ, ಎರಡು ಪಿಳಿಪಿಳಿ ಕಣ್ಣು;
ಹಾಲುಹಸುಳೆಯ ಮಂದಹಾಸವನು ಲೇಪಿಸದಕೆ,
ಒಳಗಿರಿಸು, ಜೇನು ನಗುವವೊಲಿನಿಯ ನಾಲಿಗೆಯ
ಮೇಣ್ ಹಿಮಗಿರಿಯ ಮೀರಿಸಿ ನಿಮಿರ್ದ ಹಿರಿಯಾತ್ಮವ.

ಪೂರಣವೊ? ಸೋಯಬೀನ್ಸ್, ಖರ್ಜೂರ, ಮೇಕೆ ಹಾಲು!
ಮೇಲಿನಂಚಿನವರೆಗು ದುಃಖಿಗಳ ಕಣ್ಣೀರು ತುಂಬಿ
ಪಕ್ವಮಾಡೀ ಇದನು ಸೆರೆಮನೆಯೊಳೊಂದಿನಿತು ವರುಷ
ಹೊರಗೆ ತೆಗೆ ಪರಿಯ ಪರಿವಾರದಿಂ ಗಮಗಮಿಸಗೊಳಿಸಿ,
ಚಿಂದಿಯಿಂ ಸುತ್ತಿ, ಸೆಳಬೊಂಬಿನಾಲಂಬವನ್ನಿತ್ತು
ಬಿಡಿಸು ತಾ! ಅವನೆ ಕಾಣ್! ಲೋಕತಾರಕ! ನಮ್ಮಬಾಪೂ!

—ಟಿ. ಪಿ. ಕೈಲಾಸಂ
ಅನು— ಜಿ. ಪಿ. ರಾಜರತ್ನಂ

# ಮಹಾತ್ಮಾ ಗಾಂಧಿ

ರಕ್ತನಾಳಗಳಲ್ಲಿ ಗಂಗೆ ಹರಿದಾಡಿತ್ತು
    ಹೃದಯಸಾಗರವನ್ನೆ ಮುಟ್ಟಲಿಕ್ಕೆ.
ಇಡಿ ಹಿಮಾಚಲ ಶಿಖರ ಮುದುಳನ್ನ ಸೇರಿತ್ತು
    ಭೂಮಂಡಳಕ್ಕೆ ತಿರುಗಿ ಕಟ್ಟಲಿಕ್ಕೆ.

ಕೋಟಿ ಜನತೆಯು ಕಣ್ಣ ನೀರು ವ್ಯೈಬೆವರಾಗಿ
    ರೋಮರೋಮಗಳಿಂದ ಸುರಿಯುತಿತ್ತು.
ಕೋಲನೂರಿದ ಕೈಯ ಹಿಡಿಯೊಳಗೆ ತ್ರಿಭುವನದ
    ಕೋಲ್ಮಿಂಚುಗಳ ಶಕ್ತಿ ಅಡಗಿ ಇತ್ತು.

ಶುಭ್ರ ಗಗನಾಂಬರವು ಹೊದ್ದುಕೊಳ್ಳುವ ಶಾಲು.
    ಮುಗುಳುನಗೆ ಚಂದಿರನ ಮೀರಿ ಬೆಳಗೆ,
ಅಮರ ಲೋಕದ ದಿವ್ಯ ಜ್ಯೋತಿಯೋ ಹೊಳೆಹೊಳೆದು
    ಭಾರತದ ಬೆಳಕಾಗಿ ಬಂತು ಇಳೆಗೆ.

— ದಿನಕರ ದೇಸಾಯಿ

# ಗಾಂಧಿಯುವರ ಸ್ಮಾರಕ!

ನಿನ್ನ ಪ್ರತಿಮೆಯು ನಿಲಿಸಿ
ನಾವು ಮೆರೆವುದು ವ್ಯರ್ಥ.
ನಮ್ಮ ಹೃದಯದೊಳಿರಲಿ
ನಿನ್ನ ಮರಣದ ಅರ್ಥ.

ನಿನ್ನ ಭಸ್ಮಕ್ಕೆ ಕಾಶಿ
ಗೋಕರ್ಣ ಬೇಕಿಲ್ಲ.
ನಿನ್ನ ಬೂದಿಯ ತ್ರಾಣ
ಪುಣ್ಯಕ್ಷೇತ್ರಕ್ಕಿಲ್ಲ.

ನಿನ್ನ ಕರ್ಮದ ಕಲ್ಪ-
ವೃಕ್ಷ ಅಜರಾಮರವು.
ನಿನಗೇಕೆ ಪುಣ್ಯತಿಥಿ-
ಗಳ ಬಾಹ್ಯ ಜಂಜಡವು?

ಹುಟ್ಟಿದವರಿಗೆ ಹಬ್ಬ,
ಸತ್ತವರಿಗೇ ತಿಥಿಯು.
ನಿನಗೆ ಎರಡೂ ಇಲ್ಲ,
ಯಾವುದೂ ಇತಿಮಿತಿಯು.

ನಿನಗೇಕೆ ಸ್ಮಾರಕವು ?
    ಶಿಲ್ಪಕೃತಿ, ಹೂಮಾಲೆ ?
ಲೋಕವನೆ ಬೆಳಗುತಿದೆ
    ನಿನ್ನ ಎಲುಬಿನ ಜ್ವಾಲೆ.

-ದಿನಕರ ದೇಸಾಯಿ

# ನೀ ತಂದೆಯಂತ ಬಂದೆವು

ನಮಗೆ ಗೊತ್ತಿಲ್ಲ ಇಂಥ ದಾರಿ ನಡೆದು
ನೊನ್ನೆ ಮೊನ್ನೆ ತುಂಬ್ಯಾವ ಹನ್ನೆರಡು
[illegible]ರಾದೀತು ಒಗ್ಗಾಲಿ
ಹೋದೀತು ಹಿಡಿ ಜೋಲಿ

ನಿನ್ನ ಕೋಲು ಹಿಡಿತ್ತೈತಿ ನಮ್ಮ ತೋಲು
ನಿನ್ನ ನಗಿ ಅಜ್ಜ ಕಾವಲು
ಅಂಜೀಕಿಲ್ಲ ಯಾರ್ಯಾರದು ನಮಗ
ಐತಿ ತಂದಿ, ನಿನ್ನ ಕೈ ಬೆನ್ನ ಮ್ಯಾಗ

ಕಿವಿಗೆ ಕಟ್ಟಿ ನಿನ್ನ ನುಡಿ
ನಾವು ನಡಿಯು ಹಾಂಗ ನಿನ್ನ ನಡಿ
ನಮಗೆ ಬ್ಯಾರೆ ನಾದ ಬಾಳ
ಮರಿತೇವು ಸಂಬಂಧ ಅಣ್ಣತಮ್ಮಗೋಳ

ನೀ ತಂದಿಯಂತ ಬಂದೇವು ಇಲ್ಲಿತನಕ
ನೀ ತಂದಿ, ಕೈ ಹಿಡಿ ದಾರಿ ಬರುವನಕ
ಅಂದಾರು ಮಂದಿ ಇವು ಪರದೇಶಿ ಇದ್ದು ತಂದಿ

ಈ ರಥ ಸಣ್ಣದಲ್ಲ
ದಾರಿ ಕಂದಕ ಕೊಳ್ಳ
ನಿನ್ನಂಥವನs ಬೇಕ ಇದನ ನಡಸಾಕ

ಕೆಟ್ಟ ಜಿಡ್ಡು ಹುದಲಾಗ
ನೂರು ವರುಷ ಗಾಲಿ ನೆನೆದು ನಿಂತಾಗ
ನೀ ಹೆಗಲಕೊಟ್ಟು ಎತ್ತೀದಿ
ಆ ಹುರುಪ ನಮಗೂ ಬಿತ್ತೀದಿ

ಸಿಂಗಾರಾಗೇದ ರಥ ನಿನ್ನ ಹೆಸರು ಹೇಳಿ
ಬಂಗಾರ ಕಳಸ ಗಂಧ ಕಸ್ತೂರಿ
ಬರದಾವ್ರೊ ಕೀರ್ತಿ ಹರದಾರಿ

ಹಚ್ಚೀದಿ ಎಲ್ಲಾರ ಹಣಿಗೂ ಬಿಡುಗಡೆಯ ಬಂಡಾರ
ಹಂಚೀದಿ ಒಡೆದು ಆನಂದಭಾಂಡಾರ
ಹರಿಜನ ಗಿರಿಜನ ಎಲ್ಲಾ ಜನರು ಒಂದೇ ಸಮ ಪಾಲು
ಕುಡಿದು ಬೆಳಸೇವ್ರು ನಾವು ಒಂದೇ ತಾಯ ಹಾಲು

ತೂರಿ ಹೂವು ಪವನ ಪಂಚ-ಪತ್ತರಿ
ನಾಡ ತಾಯಿ ತೇರs ತಂದಿ ಮುಂದ ಹೋರಿ
ಅಂದಿ ಇದು ಮಾರೀ ತೇರಲ್ಲ ರಕ್ತ ಹರಿಲಾಕ
ಇದು ಹೊಸ ಮಾತು ಜಗಕ

ನೆರಿಹೊರಿ ರಥಕ ರೆಕ್ಕಿ ಒಡೆದು
ಹೊಂಟಾವ ಚಂದ್ರಲೋಕಕ್ಕ ನೆತ್ತಿ ಬಡದು
ಹೊಟ್ಟೆಕಿಚ್ಚು ಇಲ್ಲ ನಮಗ ಯಾಕ ಸುಮ್ಮಸುಮ್ಮಗ

ಅವರ ಕೂವತ್ತವರಿಗಿರಲಿ
ಕುತ್ತಾಗದಿರಲಿ ನಮಗ ನಿನ್ನ ಬಾರಿ
ಬ್ಯಾಡ ಬ್ಯಾರೇ ಲೋಕ ತುತ್ತೂರಿ

— ಜಿನದತ್ತ ದೇಸಾಯಿ

# ಗಾಂಧೀಜಿಯ ಪಾದಕ್ಕೆ

ಆಫ್ರಿಕದ ಕತ್ತಲೆಗೆ ಬೆಳಕ ಬೀರಿದೆ ನೀನು;
ಆಂಗ್ಲರಧಿಕಾರ ಮೋಹವನು ಮುರಿದೆ.
ಅವರಿವರ ದುಷ್ಕೃತಿಗೆ ಕುದಿದು ಕಂಬನಿಗರೆದು
ಉಪವಾಸದಗ್ನಿಯಲಿ ನಡೆದುಬಂದೆ.

ನೊಂದವರ ತಾಯಾಗಿ ಸೇವೆಯನು ಸಲ್ಲಿಸಿದೆ;
ದೀನರಿಗೆ ನೆರಳಾದೆ ತಂದೆಯಾದೆ.
ಕೊಲ್ಲಬಂದವನೆದೆಗೆ ಕ್ರಿಸ್ತನೊಲು ಕೈಮುಗಿದೆ;
—ಸಾಕ್ರೆಟೀಸ್ !—ಮತ್ತೊಮ್ಮೆ ವಿಷವ ಕುಡಿದೆ.

ಪ್ರೊಡವಿಯನಹಿಂಸೆಯಲಿ ಕಂಡು ಹರಸಿದೆ, ಗುರುವೆ,
ಚರಕದಲಿ ಸರಳತೆಯ ಇಂಪ ಬೆಳೆದೆ;
ಭಾರತದ ಬಿಡುಗಡೆಗೆ ದುಡಿದು ತಾರಗೆಯಾದೆ,
ಎಲ್ಲರೆದೆಗೂಡಿನಲಿ ನಿನ್ನ ಬೆಳಕೆ.

ರಾಮ ಅಲ್ಲಾ ಎಲ್ಲ ಒಬ್ಬನೇ ಎಂದಲೆದು
ನವಖಲಿಯ ನೆತ್ತರಿನ ಕಣ್ಣ ತೊಳೆದು,
ಸೌಹಾರ್ದ ಸೇತುವಿನ ಶಾಂತಿ ಬಾವುಟದಂತೆ
ಜೀವಕೋಟಿಯ ಕರೆದ ಲೋಕಗುರುವೇ,

ಸುಳಿದ ಬಳಿ ಸ್ವರ್ಗವನು ಸುರಿದ ಸಿರಿಪಾದವೇ,
ಪಾರ್ಥಿವ ಪರಂಜ್ಯೋತಿಯಾದ ಬದುಕೇ,
ಮಾನವತೆಯಿಂದ ಅಂಬರ ತುಂಬಿದ ಉಸಿರೆ,
ಇಹವೆಲ್ಲ ತನ್ನದೆಂದಾಳಿದೊಲವೇ,

ಕಂಬನಿಯ ಅರ್ಘ್ಯದಲಿ ನಾಡೆಲ್ಲ ತಲೆಬಾಗಿ
ಕಲ್ಲಾಯ್ತು; ಸದ್ಗತಿಯ ತೋರು, ತಂದೆ!
ಕಡಲು, ಕತ್ತಲೆ; ಹಡಗು ಒಡೆದೀತು!—ಬೆಳಕಾಗಿ
ಭಾರತವ ಕೈಹಿಡಿದು ನಡಸು ಬಾ, ತಂದೆ!

—ಕೆ. ಎಸ್. ನರಸಿಂಹಸ್ವಾಮಿ

# ಗಾಂಧೀಸ್ತವನ

ಮನೆಗೆ ಬಂದವನೆ ದೀಪವ ಹುಡುಕಿದೆ,
ಕಣ್ಣು ಮುಚ್ಚಿದೆ, ಎದೆಯಲಿ ಮುಳುಗಿದೆ.
ಹಾರಿ ತೇಲಿ ಬಂತು ಬಿಳಿಯ ರೆಕ್ಕೆಯ ಹಕ್ಕಿ:
ಮೀನಿಗೆ ಕಷ್ಟ ಬಂತು ಅದರ ಕೊಕ್ಕಿಗೆ ಸಿಕ್ಕಿ.
ನೀರ ಮೇಲಿನ ಹಲಗೆ ನಕ್ಕು ಕನವರಿಸಿತು,
'ಗಾಂಧಿ' ಎನ್ನುವ ನೆರಳು ಅವತರಿಸಿತು.
ತೆಂಗು ಗರಿ, ತಂತಿ ಕಿಡಿ. ನೀವದನು ನೋಡಿ, ಬಿಡಿ :
ಹೊಗೆಯಾಡಿದರೆ ಕೆಂಡ, ಕೆಂಡ ಬೆಳೆದರೆ ಬೆಂಕಿ,
ಬೆಳಕು ಬೆಂಕಿಯ ನಾಲಗೆ.
ನಡೆದಿದೆ [illegible] ಎಲಿಗೆ

ಮೂರು ಬೆಟ್ಟಗಳು ;
ವಿಷವೆಲ್ಲ ಅಮೃತ ಬಂದವರ ಪಾಲಿಗೆ :
ಇನ್ನೊಂದು ಶಿಲುಬೆಗಳ ಬೆಳ್ದಿಂಗಳು ;
ಕಡೆಯ ಬೆಟ್ಟದ ಮೇಲೆ ಮೂರನೆಯ ನೆರಳು
ಹೆಬ್ಬಾವಿನೂರಿಗೋಲನು ಹಿಡಿದು, ಹೆಬ್ಬುಲಿಯ
ಹೆಜ್ಜೆಯನು ಹಿಡಿದು ನಡೆಯುತಿದೆ
ಎಲ್ಲಿಗಾದರಲ್ಲಿಗೆ!
ಅಲ್ಲಿ ಕಬ್ಬಿಣ ಕರಗಿ ಹೊಳೆಯಾಗಿ ಹರಿದಿತ್ತು,
ಸುಡದ ಸೂರ್ಯನ ಸೀಮೆ ಬಾಗಿಲನು ತೆರೆದಿತ್ತು.

"ಯಾರು ಹಿತವರು ನಿನಗೆ ಈ ಮೂವರೊಳಗೆ?"
ಮೂವರೂ ಹಿತವರೆ ನನಗೆ!
ಕೈಮುಗಿದು ನಡೆದಿತ್ತು ಕಡೆಯ ನೆರಳು;
ನಡೆದಂತೆ ಬೆಟ್ಟಗಳು ಕರಗಿ ಬಂಡೆಗಳಾಗಿ,
ಬಂಡೆಗಳು ಕರಗಿ ಕಲ್ಮಣಿಯಾಗಿ, ಮಣಿ ಕರಗಿ
ಕಣವಾಗಿ ಅಣುವಾಗಿ ಮುಗಿದಿತ್ತು ಮಿಂಚಿನಲಿ,
ಭೂಮಿಯಂಚಿನಲಿ.
ಕಾಲದಾಚೆಗೆ ತೆರೆದ ಕಡೆಯ ಬಾಗಿಲ ತಳ್ಳಿ,
ನೆಲದ ಬದುಕಿನ ನೆರಳು ಮುನ್ನುಗ್ಗಿತ್ತೆ ಸಂದು.
ದೀಪವಿತ್ತು, ದೀಪವಿಲ್ಲ;
ದೀಪವಿತ್ತು, ದೀಪವಿಲ್ಲ.
"This body has been given to us
only in order that we may serve
all creation with it."

ಲೋಕಸೇವೆಗೆ ಮುಡಿಪು ದೇಹವೆಂಬವರೆ, ಲೋಕ
ನುಡಿದವನ ದೇಹವನೆ ಬಲಿಗೊಂಡಿತು.
ನೆಲದ ನೋವನು ಅರಿತು ಅಮೃತಪಾತ್ರೆಯ ತಂದ
ದಾನಿಯನೆ ಕೈಯಾರ ಕೊಂದರಿವರು.

"ಸಿಡಿಮದ್ದು ಗುಂಡುಗಳ ಸಡಗರದ ಸಮಯದಲಿ
ಬರಿಗೈಲಿ ಹೊರಟವನು ಬದುಕಿ ಬಂದೆ.
ನೀನೆ ಬೆಳಸಿದ ಧನ್ಯ ದರ್ಶನದ ಯಜ್ಞದಲಿ
ಸರ್ವಬಲಿ ನೀನಾಗಿ ಮುಗಿದೆ, ತಂದೆ."

ದೀಪವಿತ್ತು, ದೀಪವಿಲ್ಲ:
ದೀಪವಿತ್ತು, ದೀಪವಿಲ್ಲ.

ನಿನ್ನ ಹೆಸರಿಡಬಹುದು ಬೀದಿ ಬೀದಿಗೆ ಸುಲಭ;
ನಿನ್ನಂತೆ ಬದುಕುವುದು ದುರ್ಲಭ.
ನಿನ್ನ ಹೆಸರೆತ್ತಿದರೆ, ನಿನ್ನ ಮಾತಾಡಿದರೆ
ನಿನ್ನ ವೈರಿಗೆ ಕೂಡ ಲಾಭ.

ಲೋಕವನೆ ಎದುರಿಸಿದ ನಿನಗೆ ತಿಳಿಯದೆ, ತಂದೆ,
ನಿನ್ನ ಬಾಸಿಗೆ ಕರೆದ ಗೆಳೆಯರಾರು ?
' ಮಾನವತೆಯಿಂದ ಅಂಬರವ ತುಂಬಿದ ಉಸಿರೆ ',
ನಿನ್ನ ಬಾಳಿಸ ಚಲುವ ನೀನೆ ಸಾರು.

ಹಿಂದೊಂದು ಕಾಲದಲಿ ಮುದಿಸಿಂಹ ಮುನಿದಿತ್ತು :
ಗಾಂಧಿಯೊಬ್ಬ ಮನುಷ್ಯನೇ ?
ಭಾರತದ ಬಿಡುಗಡೆಯೆ ಬೆರಗಾಗಿ ನುಡಿದಿತ್ತು :
ಗಾಂಧಿಯೊಬ್ಬ ಮನುಷ್ಯನೇ !
ಹುಟ್ಟು ಸಾವುಗಳಾಚೆ ಭರವಸೆಯ ನೆರಳಿತ್ತು :
ಗಾಂಧಿಯೊಬ್ಬ ಮನುಷ್ಯನೇ.

—ಕೆ. ಎಸ್. ನರಸಿಂಹಸ್ವಾಮಿ

# ಗಾಂಧೀಸ್ತವ

೧

ನೆನೆವೆನೆಂದಿಗು ಪುಣ್ಯಜಾತನ ನಮ್ಮ ನಾಡವಿಧಾತನ
ಜನಪದಸ್ವಾತಂತ್ರ್ಯದಾತನ ಸಕಲ ಹೃದಯೋಪೇತನ
ನೆನೆಯುತಚ್ಚರಿಗೊಳುವೆ ಮಹಿಮನ ದಿವ್ಯಮಂಗಳ ಚರಿತೆಗೆ
ಕೊನೆಯ ಕೇಡಿಗೆ ದುಗುಡಪಡುವೆನು ರಿಕ್ತವಾದೀ ಜನತೆಗೆ

೨

ನಡೆಸುವೊಲೆ ನಡೆವಂಥ ಕುರಿಗಳೆ ನೀವು ಭಾರತಪುತ್ರರೇ
ಪಡೆದುದನು ಪಡುವಂಥ ದುರ್ಬಲ ದೈವದೇಹ ನಿರೀಹರೇ
ನಡೆಯಿರೀ ಬಳಿ, ನೋಡಿಕೊಳ್ಳಿರಿ, ಪಡಿನೆಳಲನೆನ್ನರವೊಳು
ಬಿಡಿರಿ ದೈನ್ಯವನೆಂದು ಸಾರಿದ ಈತನಲ್ಲವೆ ತೀರ್ಥನು

೩

ಎನಿತು ತಾರೆಗಳಿರಲಿ, ಇರುಳೀ ಚಂದ್ರನಿಂ ಜ್ಯೋತಿಷ್ಮತಿ
ಅನಿತೆ ತಮವಿಡಿದೆಮ್ಮ ನೆಲವೀ ಗಾಂಧಿಯಿಂ ಜ್ಯೋತಿಷ್ಮತಿ
ಮನಕೆ ನಿಲುಕದ ದಿವ್ಯ ದೀಪ್ತಿಯ ಕೊಂಡು ವೈಯೊಳು ಪಳಂಚಿ
ತನಿವೆಳಗ ನಮ್ಮೆಡೆಗೆ ಚೆಲ್ಲಿದ ಸೌಖ್ಯನಿವನೆಮಗಿನಿಯನೈ

೪

ತನ್ನ ನಿಜದೊಳು ತಾನು ನಡೆಯಲು ಲೋಕ ತನ್ನಂತಪ್ಪುದು
ಉನ್ನತಿಯ ಬಯಸುವೊಡೆ ವಿಷಯದ ನಂಟು ಸಾಧಕಗೊಪ್ಪದು
ಬನ್ನಗಳ ಬೆಲೆಯಿಂದಲಾತ್ಮದ ಸಂಪದವ ವಿಧಿಯುಳಿವನು
ಎನ್ನುವೀ ಸಾಮಾನ್ಯ ನೀತಿಯಿನಾದನಿವನಸಮಾನನು

೫

ತಾಳ್ಮೆಯಿಂ ಕ್ರೌರ್ಯವನು ಶಾಂತಿಯಿಂ ಕೋಪವನು
ಸತ್ಯದಿಂತನೃತವನು ಗೆಲ್ಲಬಯಸಿ
ಜಾಲ್ಮತೆಗೆ ಜಾಲ್ಮತೆಯನೊಡ್ಡಿ ಸೆಣಸುವ ರೂಢ
ರಾಜನೀತಿಯನೊಡೆದನೀ ಸಾಹಸಿ
ನಲ್ಮೆಗುರಿಯನು ಮುಟ್ಟೆ ಪೊಲ್ಲಮೆಯ ಬಳಿಸಲ್ಲ
ಭಾವದಂದದಿ ಬದುಕು ಬೇರೆಯಲ್ಲ
ಮೇಲ್ಮೆಯನು ಸಾಧಿಪೊಡೆ ನೇರವಿರಲೆಮ್ಮ ನಡೆ
ಎಂದಿವನ ಶಿವಛಲವನಾವ ಬಲ್ಲ?

೬

ಕೇಡಿಗೆ ಕೇಡೆಣಿಸುವ ಬಗೆ ದೇವಗು ತಪ್ಪದೆನೆ
ಹಾಡುವೆನೆಂಟವತಾರದ ಗೋವಿಂದನ ಭವವ
ಈಡಾಗದೆ ಈತರ ಖಲ ಶಾಪಕೆ ಮಾತಪಸಿ
ನೀಡಿದನಭಯುವ ಲೋಕಕೆ ಈತನಿಗಾವನೆಣೆ

೭

ಹೊಗಳಲಿ ಹರಿಜನ ಶಾಪವಿಮೋಚನ ಕಾರ್ಯವ
ಹೊಗಳಲಿ ನಾಡಿನ ನೈಚ್ಯವನಳಿಸಿದ ಕಾರ್ಯವ
ಹೊಗಳಲಿ ನರಪಶು ಮಾನವನೆನಿಸಿದ ಕಾರ್ಯವ
ಹೊಗಳಿಕೆಗೂ ಮಿಗಿಲೀತನ ಕಲ್ಯಾಣಕೃತಿ

೮

ಹದಗೆಡುವೊಲು ನರಲೋಕದೊಳಾಸುರಶಕ್ತಿಯು ತುಂಬಿ
ಅದ ತೂಗಲು ದುರ್ಬಲ ಶಿವ ಸದ್ಬಲನೊಬ್ಬನ ತಂದು
ಒದಗುತ್ತಿರಲೀ ತೂಕಕ್ಕೆ ಶಿವ-ಅಶಿವದ ಸಮತುಲನೆ
ವಿಧಿಯೀತನನೊಯ್ದನಲಾ ಏನೀ ವಿಷಮವಿಲಾಸ

೯

ತಕ್ಕದೆ ಉಳಿಯುವುದೆನ್ನುವ ನಿಯಮದ
ಪಾಶವ ಲೋಕದೊಳನ್ವಯಿಸಿ
ತಕ್ಕವನೆನಿಸದ ಮಾನವ ಶಿಶುವನು
ಜೀವಶಕ್ತಿ ಹೊರತರದಂತ
ಉಕ್ಕಿನ ಯುಗದೊಳು ಯಾಂತ್ರಿಕ ಬಲವ-
ದ್ಧರ್ಮವ ಹಿಂಚಿಸಿ ಮುಂಬರಿಯೆ
ಸೊಕ್ಕಿದವರು ಬಲುನಕ್ಕು ಜರೆಯುವೀ
ಗಾಂಧಿಧರ್ಮವ ತಂದಿಹುದೋ ?

೧೦

ಮಹಾತ್ಮನುದಿಸುವ ಮುನ್ನೀ ನಾಡಿನ
ಬಾಳ್ವೆಯು ತಿರಬೇರೆ
ಇಹಯಾತ್ರೆಯನಿವ ಮುಗಿಸುತ ಮರಳಲು
ಇದರೀ ತಿರಬೇರೆ
ಮಹಾನುಭಾವನ ಸಮೃದ್ಧ ರುಚಿಯೀ
ಜೀವನೆ ರಸ ಬೆರೆತು
ಮಹಾಂತವಹುದೀ ಭಾರತ ಜೀವನ
ಸೌಹೃದ ರಸ ರುಚಿರ.

—ಪು. ತಿ. ನರಸಿಂಹಾಚಾರ್ಯ

# ಅಮರನಾದೈ, ತಂದೆ!

ಭರತವರ್ಷದ ದಿವ್ಯಧರ್ಮಪ್ರದೀಪನಂ
ಸ್ವಾತಂತ್ರ್ಯಸಾಮ್ರಾಜ್ಯ ಸೂರ್ಯಸ್ವರೂಪನಂ
ಆತ್ಮಾಭಿರಾಮನಂ ಆನಂದಧಾಮನಂ
ದಯೈಕಾಲೋಕನಂ ಲೋಕಕಾರುಣ್ಯನಂ
ಶಾಂತನಂ ದಾಂತನಂ ಪರಮಸಂಪೂಜ್ಯನಂ
ಆರ್ಯನಂ ಆಪ್ತನಂ ಸತ್ಯಸುಪ್ರೀತನಂ
ಛದ್ಮನೆಯುನಿಲ್ಲಗೈಯಲ್ಕೆಳಸಿ ಸಂಹರಿಸಿ
ಆ ಜರಾಜರ್ಝರಿತ ಪಾರ್ಥಿವ ಶರೀರಮಂ
ಅನಾಯಾಸಂ ಘಾಸಿಸಿದರೇನಂತೆ! ಅವಿನಾಶಿ
ಆತ್ಮನವೊಲಾ ಮಹಾತ್ಮನ ಮಹದ್ದರ್ಶನಂ
ಶ್ರೀಭೂತಿ ತಾಂ ಮತ್ತೆ ಧವಳ ದೀಧಿತಿಯಾಗಿ
ಸತ್ಯಸೌಹಾರ್ದತೆಯ ಲೋಕಮೈತ್ರಿಯ ಬೆಳಗಿ
ಅಮರನಾಗಿರ್ಪುದೈ ದಿನದಿನಂ ಕಳೆದಂತೆ,
ಮರಣವೃಕ್ಷದೆ ಫಲಿಸಿದಮೃತ ಫಲವೆಂಬಂತೆ.

—ಎಸ್. ವಿ. ಪರಮೇಶ್ವರಭಟ್ಟ

# ಅವತಾರಿ ಗಾಂಧಿ

೧

ಹತ್ತುಶತಮಾನಗಳ ದಾಸ್ಯಭಾರವ ಹೊತ್ತು
ಕತ್ತುಬಗ್ಗಿಸಿ ಮಾತೆ ನಿಂತಿರುವಳೇ ಹೊತ್ತು!
ಹೆತ್ತಮಕ್ಕಳು ಹಸಿದು ಹಲಬುತಿರಲಜ್ಞಾನ
ಕತ್ತಲೆಯ ಕಾರೊಡ್ಡು ಧಾರಿಗಟ್ಟಿರೆ, ಮಾನ
ಎತ್ತೆತ್ತಲೋ ಹಾರಿ, ಮಾಯವಾಗಿರೆ ತೀರ,
ಹೆತ್ತಟ್ಟೆ ಹಾರೈಸಲುದಿಸಿ ಬಂದನು ಧೀರ!

ಸತ್ಯ, ಶಾಂತಿ, ಅಹಿಂಸೆ—ಸತ್ಯಲೋಕದ ಬಿತ್ತು—
ಮರ್ತ್ಯಭುವಿಯೊಳಗಿರಲಿ ಸೂಸೆ ಸುಮನೋಗಂಧ
ಭಾರತಾಂಬೆಯ ಮಡಿಲೊಳಿಟ್ಟಿಯಲಿ ಜಸವೆತ್ತು!
ಕರ್ಮವೀರನುದಾರ ಕರ್ಮಚಂದ್ರಕುಮಾರ
ಮೋಹನನು ಮೋಹನನೆ! ದೀನಸೇವಾನಂದ
ದಾಸರತ್ನನು; ಗಾಂಧಿಯೆಂಬ ಸುಂದರ ನಾಮ—
ಮಹಿಮೆಮಂಗಳಧಾಮ! ದಿನದಿನಂ ಪಸರಿಸುವ
ಕೀರ್ತಿಯಿಂದಿನಿದಾಯ್ತು! ದೀರ್ಘಾಯುರಸ್ತು!!

೨

ಸತ್ಯದ ಹಿಮಾದ್ರಿಶಿಖರದೊಳಚಲಮಾನಸದೆ
ನಿತ್ಯನಿರ್ಮಲ ವಿಪುಲ ಪ್ರೇಮಗಂಗೆಯೊಳೆಸೆದೆ!

ಕೊಲೆ, ಸುಲಿಗೆ, ಕಳವು, ಕಾಳಗವೆಂಬಕಾಂರುಳು
ಇಳೆಯನುಂಗಿರೆ, ನಿನ್ನ ಬಾಳ ಮಿಂಚಿನ ಸರಳು
ನೆತ್ತರಿನ ನದಿದಾಂಟಿ, ಅಮೃತತ್ವಮನ್ನೀಂಟಿ,
ಹತ್ತು ಶತಮಾನದಾಯುಸವನಿದೊ ತರಿದೊಟ್ಟಿ,
ಭೂವ್ಯೋಮಗಳನೊಂದೆ ಹಿಡಿತದಲಿ ಹಿಡಿದಂತೆ,
ದಿವ್ಯಪ್ರಭಾವಳಿಯ ನಡುವಿನಲಿ ನೀನಿಂತೆ!

೩

ಪರತಂತ್ರಕಿದೊ ಕುಣಿವ ಸೂತ್ರಗೊಂಬೆಗಳಂತೆ
—ಹಿರಿಯಹಿಂದಿನ ಜನದ ಸೂತ್ರಗಳ ಮರೆತಂತೆ-
ಬದ್ಧವಾಗಲು ಜನತೆ, ಬಿದ್ದುಹೋಗಲು ಘನತೆ,
ಉದ್ಧರಿಪರಾರೆನಲ್ ಬೆನ್ನೊಳಿತ್ತಿದೆ ಸಮತೆ!
ಹಲವುಗಾಲದ ಹಳೆಯ ಶಸ್ತ್ರ-ಶಾಸ್ತ್ರಚ್ಛಿದ್ರ!!
ನಲವಿಂದ ಗೆಲವಿಂದ ಗೆದ್ದೆ, ಭಾರತಭದ್ರ!
ನಿನ್ನ ಹೊರತಾರುಂಟು ಗಾಂಧಿನಮಗಿಂದು?
ನಿನ್ನ ಜೀವನ ಭಾರತವ್ರಜದ ಮುಂದು!

—ಜಿ. ಆರ್. ಪಾಂಡೇಶ್ವರ

# ಮಹಾತ್ಮನ ಆತ್ಮಕ್ಕೆ

ನಿನ್ನ ಮಮತೆಯೊ ಮಹಾತ್ಮಾ, ಸನಾತನ ಧರ್ಮ
ಕನಿತೆ, ಭಾರತಕನಿತೆ ಅಲ್ಲ, ಜಗಕೆಲ್ಲ!
ಅರ್ಧಧರಣಿಯು ದಿನಾರ್ಧಕೆ ಬೆಳಗಿಸಲು ೧ಘರ್ಮ
ಕಿರಣ ೨ನಿನ್ನೊಲವೂರದೆಡೆ ಜಗದೊಳಿಲ್ಲ! ೪
ಕೃಷ್ಣ, ೩ಮಾವೀರ, ೪ಗೌತಮ, ೫ಯೇಸುವೀ ನಾಲ್ವ
ರವತಾರಿಗಳ ಧಾತುವಿಂದಾಯ್ತು ನಿನ್ನ
ಸೃಜಿಸಿದಾ ಪ್ರಕೃತಿ ಸೃಜಿಸುವಳೆ ನಿನ್ನನು ಹೋಲ್ವ
ನೀ ಭಾರತದೊಳೀ ಕ್ಷಿತಿಯೊಳನ್ಯನನ್ನ? ೮
ಸತ್ಯವೆ ಗಡಾ ನಿನ್ನ ಗುರಿ, ಪ್ರೀತಿ ಗಡ ದಾರಿ,
ರಾಮನಾಮವೆ ನಿನ್ನ ನಡೆವೂರುಗೋಲು;
ಗಾಳಿಯಲಿ ಗಂಧವೆನೆ ಪರಮಾತ್ಮನೊಡಸೇರಿ,
ಜಗದೊಳಕ್ಕರೆ ಬೀರಿ, ನಿತ್ಯತೆಗೆ ೬ಸಾಲು! ೧೨
ಮೋಹನಾ, ಮರೆಯದೀ ಭಾರತವ ನಿನ್ನ,
ಧ್ರುವತಾರೆಯಂತೆ ನೀ ಮುನ್ನಡಸಿದನ್ನ!

**—ಗೋವಿಂದ ಪೈ**

---

೧. ಘರ್ಮ (= ಬಿಸಿ) ಕಿರಣ = ಸೂರ್ಯ.
೨. ಒಲವು = ಪ್ರೀತಿ.
೩ ಮಾವೀರ (ಮಹಾವೀರ) ಅಂದರೆ ಜೈನ ಧರ್ಮದ ಸಂಸ್ಥಾಪಕ.
೪. ಗೌತಮ ಅಂದರೆ ಬೌದ್ಧ ಧರ್ಮದ ಸಂಸ್ಥಾಪಕನಾದ ಬುದ್ಧ
೫. ಯೇಸು ಅಂದರೆ ಕ್ರೈಸ್ತ ಧರ್ಮದ ಸಂಸ್ಥಾಪಕನಾದ ಯೇಸುಕ್ರಿಸ್ತ.
೬. ಸಾಲು = ಸಾಕಾಗು.

# ‘ಇನ್ನಿನಿಸು ನೀ, ಮಹಾತ್ಮಾ, ಬದುಕಬೇಕಿತ್ತು!’

ಇನ್ನಿನಿಸು ನೀ, ಮಹಾತ್ಮಾ, ಬದುಕ ಬೇಕಿತ್ತು!
ಈಗ ಭಾರತಕತ್ಯಗತ್ಯವಿದೆ ನಿನ್ನ,
ಬಿರುಗಾಳಿಗೊಲಿವ [1]ಹಡಗಂತಿಹುದದಾಪತ್ತು,
ನಿನ್ನ ಹೊರತಾರೊಯ್ಯೆ [2]ರೇವಿನೊಳದನ್ನ? ೪
ಹಿಮನಗವೊ ನಿನ್ನಚಲ ವಿಮಲ ಭಗವದ್ಭಕ್ತಿ,
ಜಗವನಪ್ಪುವ ವಾರ್ಧಿಯೆನೆ ಜಗತ್ಪ್ರೀತಿ.
ನಿನ್ನ ಸೂರ್ಯಾತಪಕಭಿನ್ನವಾತ್ಮಿಕ ಶಕ್ತಿ—
ಕಾದುವೈ ನಮ್ಮನೀವರಮೋಕರೀತಿ! ೮
ಸ್ವಾರ್ಥಪರರಾಗಿಹೆವು ದೇವರಿಲ್ಲೆಮಗಿಂದು,
ಸೋದರತೆ ಇಲ್ಲ, ಮುಂದಿನದಿಲ್ಲ ಗೊಡವೆ!
ಧರ್ಮಬಾಹಿರರೆಮ್ಮನೆತ್ತಲಿನ್ನಾರೆಂದು
ತೋಚದೆ,ಮಹಾತ್ಮ, ನಿನಗಿಂತು ಮೊರೆಯಿಡುವೆ ೧೨
ಗಾಳಿ ಕಾಣದೆ ಬೀಸಿ ಉಸುರುಗೊಳಿಪಂತೆ,
ತಾರ ನವಜೀವನವ ನಮ್ಮನುಳಿಪಂತೆ!

—ಗೋವಿಂದ ಪೈ

೧. ಒಲಿವ = ಅಲ್ಲಾಡುವ, ಅಲುಗಾಡುವ.
೨. ರೇವು = ಬಂದರ (Port).

## ಬಾಪೂಜಿ !

ಮಾನವತೆ ಮೈಗೊಂಡ ಓ ಮೂರ್ತಿ ಮೋಹನನೇ,
ಕರ್ತವ್ಯ—ಪರಮರಾ ಓ ಪುಣ್ಯ ಬೆಳಸೇ,—
ಗುಣಕೆ ಗಣ್ಯತೆ ತಂದೆ ಶ್ರೀಗಂಧಿ ಪಾರ್ಶ್ವದಲಿ:
ಭಾರತಕೆ ಬಾಪೂಜಿ ಭಾಗ್ಯನಿಧಿ ವಿಶ್ವದಲಿ.
ಶಾಂತಿ-ಸತ್ಯಾಹಿಂಸ ಸುಗುಣಗಳ ತವ ಮೂರ್ತಿ
ಪುಣ್ಯಾದ್ರಿ ಶಿಖರದಾ ಧವಳ ಕಾಂತಿಯು ಕೀರ್ತಿ;
ದೇಹದಾಸ್ಯದಲಿದ್ದ ನಿನ್ನಾತ್ಮತೇಜವದು
ವಿಶ್ವಾತ್ಮವಾಗಿಹುದು, ನಿತ್ಯಾತ್ಮವಾಗಿಹುದು.

ತನ್ನ ಗರ್ಭದೊಳಾಂತು ತವ ಪುಣ್ಯ ಸೌರಭವ
ಬಿರಿದು ಬೀರಲಿ ಜಗದಿ ಹೊಸ ಯುಗದ ಹೊಸನೆಂಗಗ್ಗು
ನಿತ್ಯತೆಯು ಗಬ್ಬದಲಿ ನಿನ್ನಮಲ ಶುಭಚರಿತೆ
ಹರಿಯಿಸಲಿ ಭಾರತದಿ ದಿವ್ಯ ಶಕ್ತಿಯ ಸರಿತೆ;

ಯುಗಪುರುಷ ಬಾಪೂಜಿ ಹಿರಿದು ನಿನ್ನಯ ಸ್ಥಾನ;
ನೈತಿಕದ ತುತ್ತ ತುದಿ ನೀನಿಂತ ಆ---ಸ್ಥಾನ.

-ಎಸ್. ಎಸ್. ಬಸುಪಟ್ಟದ

# ಶುಭೋದಯ

## (ಅಕ್ಟೋಬರ ಎರಡು)

೧

ಮುಂಜಾವು ಮುಗಿಲು ಹೊಗರೇರಿತು
ಆಕಾಶ ಮಂಟಪಕೆ ಕಿರಣ ತೋರಣ ಕಟ್ಟಿ
ಉದಯ ರವಿ ತೇಜಸ್ವಿ ಮೇಲೇರಿದ
ಸುತ್ತು ಭೂಮಂಡಲಕೆ ದಯೆದೋರಿದ.
ನಸುಕಿನಲ್ಲಿಯೆ ಎದ್ದು ಹಕ್ಕಿ ಹಾಡನು ಕಟ್ಟಿ
ಶಕುನ ಹೇಳುವ ಕೊರವಿ ಹಾಡುತಿತ್ತು
ನಿದ್ದೆ ಮಂಪರು ಕವಿದು ಮಲಗಿದ್ದ ಜಗಕೆಲ್ಲ
ಉದಯರಾಗವ ಮಾಡಿ ಎಬ್ಬಿಸಿತ್ತು.
ಏಳೊ ಗೆಳೆಯ,
ಇದೊ ನಿನಗೆ ಶುಭೋದಯ
ನೆಲದ ನರನಾಡಿಯಲಿ ಸಂತೋಷದುದಯ !

೨

ಈ ನಾಡ ಕಥೆಯಲ್ಲಿ ಇದು ಒಂದು ಹೊಸ ಹಗಲು
ಪುಣ್ಯ ಪ್ರವಾಹದುಗಮ.
ಜನಮನದ ಜೀವನದ ಸಂಜೀವನ
ಮಳೆ ಹೋಗಿ ಬೆಳೆ ಹೋಗಿ ಇರುವ ನೆಲ ಹಾಳಾಗಿ

ಭೂಮಿ ತಳಮಳಿಸುತಿತ್ತು
ಒಂದೊಂದೆ ಹನಿಗಾಗಿ
ಮಣ್ಣು ಕಣ ಬಿಕ್ಕುತಿತ್ತು.
ಆ ಹಿಮಗಿರಿಯೆ ಕರಗಿ ನೀರಾಗಿ
ಸಮತಳಕೆ ಇಳಿದು ಬಂತು
ಮನೆಮನೆಯ ಹೊಸತಿಲಕೆ ಹರಿದು ಬಂತು.
ಅಲಲಿ ಕೂಡಿ ಕೊಳೆಯೇರಿ ಬಿದ್ದಿದ್ದ
ಕಸ ಕೊಳಚೆ ಇದರಲ್ಲಿ ಕೊಚ್ಚಿ ಹೋಯ್ತು
ಅದರ ಭವ್ಯತೆಗೆ
ಧೀರ ಗಂಭೀರತೆಗೆ
ಈ ಮನಸು ಮಾರು ಹೋಯ್ತು !

೩

ಬೆಳಕಿಲ್ಲದೀ ಮನೆಗೆ ಬೆಳಕಾಗಿ ಬಂದನಿವ
ಚಿಕ್ಕೆಯಂಗಳದಿ ಚಂದ್ರಾಮ ಚೆಲುವ !
ದಳದಳವೇರಿ ಕಳೆಯೇರಿ
ಇರುಳ ಮಲ್ಲಿಗೆಯರಳು ಬೆಳುದಿಂಗಳು.
ಅವನೊಂದು ಕಣ್ಣಿನಲಿ ಆ ಪ್ರಶಾಂತ ಪ್ಯಾಸಿಫಿಕ
ಇನ್ನೊಂದು ತುಂಬಿತ್ತು ಅಟಲಾಂಟಿಕ
ಜನಸಮುದ್ರದ ಹರ್ಷ ಉಕ್ಕೇರಿ ನಿಂತಿತೋ
ಧವಳಗಿರಿ ಕೀರ್ತಿ ಕಳಸ
ನಮ್ಮ ಉದ್ಧಾರಕ್ಕೆ ದೇಹ ಸವೆಸಿದನಿವನು
ಸ್ಥಿತಪ್ರಜ್ಞ, ಓ ಪುಣ್ಯಪುರುಷ.

ದೀನ ದಲಿತರ ಎದೆಯ ಮಾನಸದಿ ವಿಹರಿಸುವ
ಶ್ವೇತ ಪದ್ಮಸ್ನೇಹಿ ರಾಜಹಂಸ
ಅವನ ಸಹವಾಸವೋ....
ಅಸಿಧಾರಾವ್ರತ !
ಹಿಂದಿನವರಿಗೂ ಅವನ ಒಂದೊಂದು ಹೆಜ್ಜೆಗಳು
ಸುವಿಶಾಲ ರಾಜಮಾರ್ಗ.
ನಡುಹಗಲ ದೀವಟಿಗೆ ಹಿಡಿದು ನಡೆವವನಿವನು
ಕಣ್ಣಿನಲಿ ಕಂಡಿತ್ತು ಮುಂದೆ ಸ್ವರ್ಗ.

—ಸಿದ್ದಣ್ಣ ಮಸಳಿ

# ಓ! ತಂದೆ

ನಿತ್ಯಜೀವನದಲ್ಲಿ ಸತ್ಯಶೋಧನಗೈದು
ಸದ್ಗುಣದ ಗಂಧ ಬೀರುತ ಗಾಂಧಿಯಾದೆಯಾ?
ಭಾರತಾಂಬೆಗೆ ಮಣಿದು ಪಾರತಂತ್ರ್ಯವ ಹರಿದು
ಸ್ವಾತಂತ್ರ್ಯ ಸಂಘರ್ಷ ಮುಕ್ತಿ ಸವಿ ನಾಂದಿಯಾದೆಯಾ?

ಬಾಳು ಕಪಟದ ಕೂಟ, ಅನ್ಯಾಯದ ಹೋರಾಟ.
ಗೆಲ್ಲಬೇಕಿಲ್ಲದಿರೆ ಸೋತುಸಾಯುವ ಆಟ!
ಸೋಲನರಿಯದೆ ಸತತ ಗೆಲ್ಲುವವನೆ ವೀರ
ಕದನ ನಡೆಯುವೆ ತಡೆವ ನೀ ವೀರಾಧಿವೀರ!
ನೀನೆ ಸದ್ಬಲಶಾಲಿ ನೀನೆ ಸತ್ಯಾಗ್ರಹಿಯು,
ಬಲಿಗೊಳ್ಳದ ಬಲಿಗೊಡದ ಕಲಿ ಕರುಣಾಮೂರುತಿಯು!

ಓ! ತಂದೆ, ನೀನು ತೋರಿದ ಹಾದಿ ಜಗನ್ಮಾನ್ಯ
ಹಿಡಿಯಬೇಕಿದೆ ತುಳಿಯಬೇಕದನೆ, ಸಿಗದನ್ಯ!
ತುಷ್ಟಿಪುಷ್ಟಿ ಜನಾಂಗ ಐಕ್ಯ ಶಾಂತಿಗೆ ಮಾತ್ರ
ಅಹಿಂಸಾವಾಣಿಯೇ ಪರಮಪಾವನ ಮಂತ್ರ!

—ಭುಜೇಂದ್ರ ಮಹಿಷವಾಡಿ

# ಜ್ಯೋತಿ ನಂದಿಹೋಯಿತೆ ?

೧

ಜಗವನೆಲ್ಲ ಬೆಳಗುತಿರುವ
ಜ್ಯೋತಿ ನಂದಿಹೋಯಿತೆ ?
ಶಾಂತಿ-ಸುಧೆಯ ನದಿಯು ಬತ್ತಿ
ಅರಬು ಬಂದುದಾಯಿತೆ ?

೨

ಸತ್ಯ-ಸೂರ್ಯ ಜಾರಿ ಕೆಳಗೆ
ಬಿದ್ದು ಬೂದಿಯಾದನೆ ?
ಇಲ್ಲ ಕೋಟಿಸೂರ್ಯರಾಗಿ
ಎದ್ದು ಮೇಲೆ ಹೋದನ !

೩

ನಾಟ್ಯವಾಡಿ ತೆರೆಯ ಮರೆಗೆ
ಸರಿದು ಮಾಯವಾದನೆ ?
ಇಲ್ಲಿ ಬಂದು ಎಲ್ಲರಾತ್ಮ—
ದೀಪ ಹಚ್ಚಿ ಹೋದನೆ ?

೪

ಕೆಲಸ ಮುಗಿಪ ಮುನ್ನ ಹೋದ,
ಮರಳಿ ಬರುವನೆಂದಿಗೊ ?
ಗ್ಲಾನಿಹೊದಿಕೆ ಹೊದ್ದು ಮಂದಿ
ನಿದ್ದೆಗೊಳುವ ಸಂದಿಗೊ ?

೫

ಜಗದ ಜನರ ಕಣ್ಣನೀರ
ಕಡಲು ಮೊರೆಯ ತೊಡಗಿದೆ
ನೋಡು ಅವನ ಹೆಸರು—ಹಡಗ
ತೇಲಿ ಮುಂದೆ ನಡೆದಿದೆ !

೬

ಈಜೆಯುವರನಾಚೆಗೊಯ್ದು
ಪಾರುಮಾಡಿ ಬಿಡುತಿದೆ !
ದೇವ ಸನ್ನಿಧಾನದಲ್ಲಿ
ಒಯ್ದು ಮುಕ್ತಿಗೊಡುತಿದೆ !

೭

ಏರು, ಮೇಲೆ ಹತ್ತು ಬೇಗ
ಹೊತ್ತು ಮುಳಗಲಿರುವುದು !
ಕಣ್ಣು ಕಾಣುವನಿತರಲ್ಲಿ
ಆಚೆ ದಡಕೆ ಸರಿವುದು !

—ಭುಜೇಂದ್ರ ಮಹೀಷವಾಡಿ

# ಗಾಂಧಿಕಿರಣ

ಇಂದಿಗಿಂದು ಮೊಳಗುತಿಹುದು
ಒಂದೆ ದೈವ ವಾಣಿಯು
‘ ಪ್ರೀತಿಯೊಂದೆ ಎಲ್ಲ ನೀತಿ
ವಿಶ್ವವಾಳ್ವ ರಾಣಿಯು ’ ॥ ಪ ॥

ಪ್ರೀತಿಗಿಲ್ಲ ಯಾತಕೆಂಬ
ಅತಿಯ ಮತಿಯ ಛಂದವು
ಅವರಿಗಿವರಿಗೆಂಬ ಎಲ್ಲೆ
ಇಲ್ಲ ಯಾವ ಬಂಧವು.

ಸುರಿವ ಮಳೆಗೆ ಹರಿವ ಹೊಳೆಗೆ
ಬಿಸಿಯ ತಂಪು ಕಿರಣಕೆ
ತಡೆವರಾರು ? ಪಡೆವರೆಲ್ಲ,
ಅಳುಕದೊಲವು ಮರಣಕೆ.

ಜೀವಜಾತವೆಲ್ಲವಿದಕೆ
ಪ್ರೀತಿಯಿಂದ ಜನನವು
ಬೆರೆತು ನಲಿದು ಬಾಳುವುದಕೆ
ಪ್ರೀತಿಯಿಂದ ಜತನವು.

ಒಡಲ ಪ್ರೀತಿಯಿಂದ ಮೊದಲು
ಸರಸು ಸರಸ ಕಾಡಿದ.
ಅರಸು ಮೆರೆದು ಆಳತುಳಿದು
ಇಳೆಯು ನರಕವಮಾಡಿದ.

ಮುಂದುವರಿದ ಬದುಕದಿಂದು
ಹೊಂದಿ ಬದುಕದಾಗಿದೆ.
ಘೋರಹೋರಾಟನ ಸೊಂಪುಸವಿಗೆ
ಹೃದಯ ಮಾರಿಕೊಂಡಿದೆ.

ಮೋಹಮೋಸ ನೇಹವೆಂಬ
ಹೆಸರು ತಾಳಿ ಮೆರೆಯುತ್ತ
ಸುಳ್ಳುದಾರಿಯಲ್ಲಿ ಬಾಳಿ-
ನೆಲ್ಲ ಬಲವನೆಳೆಯುತ

ಮುಗಿಲು ಕವಿದು ದಾರಿಮುರಿದು
ಕತ್ತಲಾದ ನೆಲದಲು
ಬಂದಿತಿಂದು ಗಾಂಧಿಕಿರಣ
ಪ್ರೀತಿಪಥವ ಬೆಳಗಲು.

ತನ್ನ ಬಾಳ ಶುಚಿಯುಗೈದು
ಸಾರಿತದರ ರೀತಿಯು :
' ಪ್ರೀತಿಯೊಂದೆ ಜಗದ ಸತ್ಯ
ಸತ್ಯವೆನ್ನ ಪ್ರೀತಿಯು. '

"ಪತಿತ ದಲಿತವೆಲ್ಲ ಜನದ
ನೋವು ನಲಿವು ನನ್ನವು
ನೋವು ಕಳೆಯೆ ನಲವು ಬೆಳೆಯೆ
ನನ್ನ ಬಾಳು ಸಫಲವು.

ಮನವೆ ಪ್ರೀತಿ ಮೈಯೆ ಪ್ರೀತಿ-
ಯಾದರದುವೆ ಸೇವೆಯು.
ಕೆರಳಿದಂಥ ಕಡಲಿನಲ್ಲಿ
ಅದುವೆ ನನಗೆ ನಾವೆಯು.

ಎಲ್ಲ ತಮವನೆಲ್ಲ ಮದವ-
ನೊಲವುದುಂಬಿದೆದೆಯಲಿ
ಇದಿರಿಸುತಲಿ ಅದುರಿಸುವೆನು
ಹಗೆಯು ಭಯವು ಅಳಿಯಲಿ.

ನನ್ನಹಿಂಸೆ ಪ್ರೀತಿಯೆಂಬ
ಹಿರಿಯ ಬಾಳಮಂತ್ರವು
ಅದುವೆ ಜಪವು ಅದುವೆ ತಪವು
ಅರಿದ ಮನದ ತಂತ್ರವು."

-- ಇಂತು ಸಾರಿ ಜಗವ ಬೆಳಗಿ
ಹೊರಟಿತಯ್ಯ ಕಿರಣವು
ಕೊಲ್ಲಲಿಲ್ಲ ಅದನು ಸುತ್ತಿ
ಮುತ್ತಿ ಬಂದ ಮರಣವು.

—ರಂ. ಶ್ರೀ. ಮುಗಳಿ

# ವಿಶ್ವಮಾನ್ಯ !

೧

ಏನಿದು ತಲೆ ಎಂತಹಕಲೆ
ವಿಶ್ವವೆ ತಲೆದೂಗಿತು ಸಲೆ
ಗುಣಮೋಹನ ಮನಮೋಹನ
ಸರ್ವಕಾಲ ಜನಾದರಣ !
ಸುರಿಯಿತು ನುಡಿಮುತ್ತಿನ ಮಳೆ
ದೆಸೆದೆಸೆಗೂ ಬೆಳಗಿತು ಕಳೆ !
ಸರ್ವದೇಶ ಒಪ್ಪುವಂಥ
ಸರ್ವಜನತೆಯುಪ್ಪುವಂಥ
ವಿಶ್ವಾತ್ಮಕ ದೃಷ್ಟಿಯಿಂತು
ಆತ್ಮೀಯತೆ ಭಾವ ಬಂತು !
ವಿಶ್ವಮಾನ್ಯ ಮೂರ್ತಿಗೆ ! !

೨

ಸಲೆ ಅಹಿಂಸೆ ಸತ್ಯಶಾಂತಿ
ಅಂಗಾಂಗದೊಳದರ ಕಾಂತಿ !
ಎಂತಹ ಬಗೆ! ಎಂತಹ ನಗೆ
ಮಿತ್ರನಹನು ಎಂಥವ ಹಗೆ !
ನುಡಿಗು ನಡೆಗು ನಿಕಟ ಸ್ನೇಹ
ದೀನ ದಲಿತದಯಾಭಾವ !

ಪ್ರೇಮ ಪೂರ್ಣ ಬೆಳದಿಂಗಳು
ತುಂಬು ಚೆಲ್ಲಿದ್ದಿತು !
ಸ್ನೇಹ ವಿಪುಲಗಂಗೆಯಾಗಿ
ಇಳಿಯುತುಂಬ ಚಲಿಸಿದೆ !
ತಾಳ್ಮೆ ಆಳ ಜಲಾಶಯವು
ನೀತಿಯಲ್ಲಿ ವಿಪುಲ ಜಲವು !
ಹೃದಯದೊಳಗು ಸುಮಕೋಮಲ!
ಎದೆಯು ಹೊರಗು ವಜ್ರಶೀಲ!!
ಮೂಡಣ ದೆಸೆಯೊಲವು ಶಾಂತಿ
ಒಂದು ಕಣ್ಣೊಳಿಳಿದಿದೆ !
ಪಡುವಣದೆಸೆ ವಿವಿಧ ಕಾಂತಿ
ಸೇರಿ ಕಣ್ಣು ತಳೆದಿದೆ !!

ಈ ಅನುಪಮ ಸ್ಪೃಹ ಸಮ್ಮತಿ
ಜಗಕೆನಿಸಿತು ಸೋಜಿಗವತಿ !
ಈ ಕೃತಿ ನಿರ್ಮಾಣದ ಗತಿ
ತಿಳಿದನು ತಿಳಿಯುಳ್ಳವ ಮತಿ
ತಿಳಿಮನಸಿನ ಮೌಲಸಾಧನೆ
ಒಳಚೇತನೆ ಹೃತ್ಪ್ರೇರಣೆ
ಅರಳಿತು ಕಲೆಯಾಗಿ
ಮೂಡಿತು ಕೃತಿಯಾಗಿ !

× × × ×

ಗಮಗಮಿಸಿತು ನಿನ್ನದು ಸ್ಮೃತಿ!
ವಿಶ್ವಮಾನ್ಯ ನಿನ್ನಯ ಕೃತಿ !!

—ಬ. ಗ. ಯೆಲ್ಲಟ್ಟಿ

# ಅಹಿಂಸೆ-ಗಾಂಧಿ

ಅಹಿಂಸೆ ನಮ್ಮ ಮಂತ್ರ !
ತ್ಯಾಗ ನಮ್ಮ ತಂತ್ರ ॥

ಭರತ ಭೂಮಿಯೊಳಿದ್ದ ಪ್ರಳಯದ ಕಸಕಿತ್ತು !
ಮಾರಿಗೌತಣವಿತ್ತ ಮಲಿನತೆಯ ಕಳೆದೊಗೆದು ॥
ಅಹಿಂಸಾ ನೀರೆರೆದು ತ್ಯಾಗಬೀಜವ ಬಿತ್ತಿ |
ಸರ್ವೋದಯದ ಸಸಿಯ ನೆಟ್ಟನಾ ಮಹಿಮ ॥ ೧ ॥

ಆ ಸಸಿಯು ಫಲಪುಷ್ಪಂಗಳ ನೀಡಿ ಬೆಳೆಯಿತು ನಮಗೆ |
ಶೀತಲದ ನೆರಳನದಿ ಪಸರಿಸುತ್ತ ಹರಿದಾಡಿ ॥
ಹೊಸ ಉಸಿರು ಸುಳಿದಾಡಿ ನವಕಾಂತಿಯೊಡಮೂಡಿ |
ವಸುಮತಿಯು ಚಿರಗಾಗೆ ಅಮರರಾದೆವು ನಾವು ॥ ೨ ॥

ಹನಿರಕ್ತ ಸುರಿಯಲ್ಲಿ ! ಮನೆಯು ಧರೆಯು ಸುಳಿದಿಲ್ಲ !
ಪ್ರಾಣಿಗಳ ಹುರಿದೊಗೆವ ಅಸ್ತ್ರಗಸ್ತ್ರಗಳಿಲ್ಲ ॥
ಚಣಚಣಕೆ ಪರರಕ್ತ ಕುಡಿಕುಡಿದು ಬೆಳೆದಿಲ್ಲ !
ಎಂದೆಂದು ಹೀಗಿದ್ದು ಅಮರರಾದೆವು ನಾವು ॥ ೩ ॥

ಅನುಸರಿಸಿದೆವು ನಾವು ವಂಚನೆಯ ಮಾತನ್ನು ।
ಪ್ರೇಮತ್ಯಾಗವ ಮರೆದು ಸ್ವಾರ್ಥಪರರಾಗಿಹೆವು ॥
ಹೇಮದಾಶೆಯ ತೊರೆದು ನಿಜಮನುಜರಾಗೋಣ ।
ಆ ಮಹಾತ್ಮನ ದಿವ್ಯ ಪಥವಿಡಿದು ಬದುಕೋಣ ॥ ೬ ॥

ಅಹಿಂಸೆ ನಮ್ಮ ಮಂತ್ರ ।
ತ್ಯಾಗ ನಮ್ಮ ತಂತ್ರ ॥

-ಕವಿರುದ್ರ

# ಗಾಂಧೀಜಿಗೆ

ಎನಿತು ಶತಮಾನಗಳ ನಿಶ್ಚಲ ತಪೋನಿಷ್ಠೆ
ಫಲಿಸಿತೋ, ಭಾರತಿಯ ಸೌಭಾಗ್ಯ ಬೆಳಗಿತೊ !
ಸತ್ಯನಿರ್ಮಲ ಶಾಂತ ಮೂರ್ತಿಗಾಂಧೀಜಿ ! ನಿಮ್ಮ
ಪುಣ್ಯಜನ್ಮೋದಯದ ಮಂಗಲೋತ್ಸವದಂದು ?
ಅಸ್ತೇಯ ಬುದ್ಧಿ ದಯೆ ಸ್ಥಿರಸತ್ಯವ್ರತಗಳಲಿ
ಸಿದ್ಧಿಗೊಂಡಿಹ ನಿಮ್ಮಜೀವ ಪಾವನವಾಯ್ತು !
ಹೆತ್ತೊಡಲಿಗಮೃತಸಿಂಚನವಾಯ್ತು ! ನಿಮ್ಮಿಂದ
ರಾಷ್ಟ್ರ ಸರ್ವಾಂಗದಭ್ಯುದಯ ಸಾಧನೆಯಾಯ್ತು.

ದರ್ಪಮದಮೋಹಿತರು ಸ್ವಾರ್ಥಸುಖ ಸಾಧಕರು
ಮತಿಗೆಟ್ಟ ಮಾನವರು ಜಗವಪೀಡಿಸುತಿರಲು
ಪಶ್ಚಿಮದ ಭೂದೇವಿ ಕೆರಳಿದಳೆ ? ಪ್ರಳಯ ಪಂ-
ಥವ ತೊಟ್ಟು ಲೋಕನಾಶಕೆ ಮನವ ಮಾಡಿದಳೆ ?
ಜೀವಿಗಳು ಕೂಗುತಿವೆ: ಕಾಪಾಡಿ ಕಾಪಾಡಿ
ರೆಂದನ್ಯಗತಿಯಿಲ್ಲದಿಂದು ನಿಮ್ಮನೆ ನೋಡಿ !

—ಕಯ್ಯಾರ ಕಿಞ್ಞಣ್ಣ ರೈ

# ಅಮರಜ್ಯೋತಿ ಬಾಪೂಜಿ

ನಿನ್ನ ಹುಟ್ಟು ಹಬ್ಬದಂದು
ಅಟ್ಟಹಾಸದಿಂದ ಸಂದು
ಒಟ್ಟುಗೂಡಿ ನಿಂದಿಹೆವು 'ಜಯ' ಬಾಪೂಗೆಂದು
ನಿನ್ನ ಒಡಲು ಹಾಲುಗಡಲು
ಲೋಕಕೆಲ್ಲ ಉಣಲು ಬಡಿಸಿ
ನೀಂಟಿದೆಮ್ಮ ಮಡಲುಕಲ್ಮಷ, ನಾಡನಾಯಕ

ಸನಾತನಿ ಸಂತನಲ್ಲ
ಸಂಪ್ರದಾಯ ಶರಣನಲ್ಲ
ಸತ್ಯಸಂಧ ಪ್ರೇಮತಪಸಿ ನಮ್ಮ ಪಾಲಕ
ಲೋಕ ವಿರೋಧಿ: ದೀನದಲಿತ
ಹೀನ ಅಬಲ ವೃದ್ಧರೆಲ್ಲರ
ರಕ್ಷಬದ್ಧನು; ಬಾಪೂ ಲೋಕನಾಯಕ

ನಿನ್ನ ಮರಣ ನನ್ನ ಹರಣ
ಕದುವೆ ಕಿರಣವಾಗಲಿ
ನಿನ್ನ ಬಾಳು, ಬಯಕೆ ಎನಗೆ ಹರಕೆಯಾಗಲಿ
'ದೀನ'ರೆಲ್ಲ ಒಳಗವಾಗಲಿ
'ಪಾಪಿ'ಎನ್ನ ದೇವರಾಗಲಿ
ನಿನ್ನ ಅಮರಜ್ಯೋತಿ ಎನಗೆ ದಾರಿತೋರಲಿ

**—ಜಯದೇವಿತಾಯಿ ಲಿಗಾಡೆ**

# ಭಾಗ್ಯವದು ಬಯಲಾಯಿತೆ?

ಕೊಲಬೇಡಿ ಕೊಲಬೇಡಿ ಕೊಲಬೇಡಿ ಕೊಲಬೇಡಿ
ಕೊಲಬೇಡಿರೆಂದೆಂಬ ತತ್ತ್ವಸಂಜೀವನವೆ
ಕೊಲೆಗೆ ಬಲಿಯಾದ ಕೇಡನು ಮೀರ್ವ ಕೇಡುಂಟೆ?
ಕಗ್ಗೊಲೆಗಳಿಗೆ ಕೋಡಿದು।
ಬಲು ಮುಂದುವರಿದವರು ಭಾರತೀಯರು ನಾವು
ಬಲು ಹಿರಿದು ನಮ್ಮ ಸಂಸ್ಕೃತಿಯೆಂಬ ಹೆಮ್ಮೆಗಳ
ಬಲುಹು ಬರಿದಾಯ್ತು ನಮ್ಮೊಳಗಿರ್ಪ ಕಿಲುಬಿಂಗೆ
ರಕ್ತಸಾಕ್ಷಿಯು ಕೊಲೆಯಿದು ॥ ೧

ದೌರಾತ್ಮ್ಯ ದೌರ್ಜನ್ಯ ಕ್ರೈರಾತ ಕರ್ಮಗಳ
ಕಾರಣದ ವಿಷಮೂಲಗಳನಿಲ್ಲದಂತೆಸಗಿ
ಭಾರತದೊಳಿಲ್ಲವರು ನಿಜ ಮನುಜರಾಗಲ್ಕೆ
ಮುಕ್ತಾವಕಾಶ ಕೊಡಲು।
ನೂರ ಇಪ್ಪತ್ತೈದು ವರ್ಷಂಬರಂ ಬಾಳ್ದು
ಪಾರತರ ರಾಮರಾಜ್ಯವ ರಚಿಸಬೇಕೆಂದ
ಧೀರಂಗೆ ಕಾಲಾಗ್ನಿಗೋಲಕಂ ಬಡಿವಂತೆ
ಬರೆದ ಬಿದಿ ಏಂ ಕ್ರೂರನೋ! ॥ ೨

ಸದುವಿನಯುವೇ ಮಾನವಾಕೃತಿಯು ತಾಂತಿಹುದೊ
ಸದಸದ್ವಿವೇಕವೇ ಬಿಳಿಬಟ್ಟೆಯುಟ್ಟಿಹುದೊ
ಪದವಿಡುತ ಬರುತಿಹುದೊ ಸದ್ಗುಣದ ಸಂಚಯಂ
ನೆಲದಿ ತಾನೆಂದೆನಿಸುತ।

ಚೆದರಿಕೆಯು ಬಲವಿಳಿಸಿ ಹೃದಯಗಳ ಹೆದಗೊಳಿಸಿ
ಸದಯತೆಯು ನೆಲೆಗೊಳಿಸಿ ಶಾಂತಿಯಮೃತವನುಣಿಸ
ಮಿದುನಗೆಯು ಮುದುಕನನು ನಮ್ಮ ಬಳಿಯೊಳೆ ಕಾಂಬ
ಭಾಗ್ಯವದು ಬಯಲಾಯಿತೆ ॥ ೩ ॥

ಕಾಣದೊಡಮೇಂ ಕಂಗಳಿಂಗವನ ಮೃದ್ದೇಹ ?
ಕಾಣುತಿಹುದವನ ಘನ ತಾತ್ತ್ವಿಕದ ಚಿದ್ದೇಹ !
ಕಾಣಬಹುದವನೆ ನಾವಾದ ಪಿರಿದದ್ಭುತವ-
ನವನ ನಡೆಯೊಳೆ ನಡೆದೊಡೆ !
ಜ್ಞಾನಹೀನತೆಯಲ್ತೆ ಹೀನ ಚರ್ಚೆಯ ಮೂಲ ?
ಜ್ಞಾನಕ್ರಿಯಾಮಿಲನವಲ್ತೆ ಪ್ರಗತಿಯ ಕೀಲ ?
ಜ್ಞಾನಮೂರ್ತಿ ಮಹಾತ್ಮನಿಗೆ ಶಾಂತಿದೊರೆವಂತೆ
ನಡೆವುದೆಂದಿಗೆ ನಾವು ? ॥ ೪ ॥

-ಗಂಗಪ್ಪ ವಾಲಿ

# ಗಾಂಧೀಜಿ

ಅಹುದಿಳೆಯು ಪರವಶಾಭಿಮಾನಿಯಿವ, ಇಳೆಯಣುಗನು
ಬಾನ್ ನೋಡುತಿರಲು
ಬಂದಿಲ್ಲಿ ಪ್ರಾರಂಭಿಸಿದ ತನ್ನ ಬಾಳ ಯಾತ್ರೆ,
ಧ್ರುವತಾರೆ ಮೂಡುತಿರಲು.

ಹಾಳಾದ ನಂದನಕೆ ಆದಮನು ಬಂದೊದಗಿದ
ಗೆಯ್ಯುತ ಪುನರ್ ನಾಮಕರಣ
ವಸ್ತುಗಳಿಗೆಲ್ಲ ಹೊಸ ಚಂದನನು ತಂದನವನು
ಬೆರಗು ಬಡುತಿರಲು ಸ್ಮರಣ.

ನಿಶಾಚರರ ಮಧ್ಯದಲಿ ಎಳೆಯನಿವ ದೇವಕುವರ,
ಕಿರುಬೆರಳಿನಿಂದೆತ್ತಿದ
ಬೆಳಕಿನಾ ಬುಗ್ಗೆಗಳ ಮೇಲ್ ಬಿದ್ದ ಪರ್ವತವನು.
ಅಮೃತಬೀಜವ ಬಿತ್ತಿದ.

ಜಡಜೀವವ್ಯೂಹ ಸುತ್ತಿರುವೀ ಪ್ರಪಂಚದಲ್ಲಿ
ತೂರಿದನು ಚೈತನ್ಯವ.
ಉದಿಸಿತ್ತು ನಕ್ಷತ್ರದೊಲು ದಸ್ಸವಿರುವ ಶಾಂತಿ
ಅನಂತ ಪ್ರೀತಿಯ ವೈಭವ.

ಬೇಕಾರಿ. ಬರಿ ಚರ್ಮ. ಬರಿ ಎಲುಬು.
ಆದರಿವನು
ರಾಷ್ಟ್ರರುಧಿರದ ಆಗರ.
ಪುಂಜೆಯುಟ್ಟಿಹ ರೈತ, ನಮ್ಮ ತಲೆವಾರಿಗಿವನು
ಬುದ್ಧ, ಕೃಪಾಸಾಗರ.

ಸಪ್ತರ್ಷಿ-ಮಂಡಳಗಳಾಚೆ ದಾಂಡೀಯಾತ್ರೆಗೆ
ಕೇಳಿ ನಕ್ಷತ್ರಗಾನ,
ನಡೆವಿರುವ ಹಿರಿಯನಿವ ವ್ಯಾಧನನು ಸಾದುಗೊಳಿಸಿ,
ಮುಗಿಲ ಗಂಗೆಯಲಿ ಸ್ನಾನ

ಕಾಲಲವಣಾಂಬುಧಿಯ ಕ್ಷಾರಜಲಗೆಯ್ಯುತುಪ್ಪು
ದೇವಗಣದೂಟಕೆಂದು
ಒಯ್ದನಮರಾವತಿಗೆ ಜೀವಿತದ ಸಾರದಂತೆ
ಋಷಿ, ಕ್ರಾಂತಿಪುರುಷನಿಂದು

ಕರೆಯುವನ ಓ ತಮ್ಮ ! ಓ ಅಣ್ಣ ! ಕರೆ ಅವನನು
ತವಕಿಸಿದೆ ಲೋಕವಿಲ್ಲಿ !
ನಮಗಿರುವದವನಾಚು. ಸೃಷ್ಟಿಗೇ ಬಂತು ಪೇಚು.
ಹೋದರೇನಾಯ್ತು ಮೈ ಚೆಲ್ಲಿ ?

ಕರೆ ! ನಮ್ಮ ಶಿಲಾಹೃದಯಗಳು ಸೂರ್ಯಕಾಂತದಂತೆ
ಅವನುದಯವಿರೆ ದ್ರವಿಸಲಿ !
ಜ್ಯೋತಿಧೂಮ್ರದ ವಲಯ ನಕ್ಷತ್ರವಾಗುವಂತೆ
ಪುಣ್ಯವಿದು ಪಲ್ಲವಿಸಲಿ !

ಕರೆಯುವನ ಓ ತಮ್ಮ ! ಓ ಅಣ್ಣ ! ಕರೆ ಅವನನು !
ಕಣ್ತುಂಬ ನಮ್ಮ ನಡುವೆ
ಸುರುಳಿಸುತ್ತಿಡಬೇಡ ಬರಿ ದಂತಕಥೆಯಮಾಡಿ,
ಬರಿನಾಮಶೇಷದೊಡವೆ.

—ವಿನಾಯಕ

# ಮಹಾತ್ಮ

ಎಲ್ಲವನು ಬಲ್ಲವನು ಎಲ್ಲರಿಗು ಒಲಿವವನು
ಎಲ್ಲವನು ಗೆಲುವವನು ನೀನು ಕಾಣಾ,
ಎಲ್ಲ ಸೊಬಗನು ಸವಿದು ಬಲ್ಲವನು ನೀ ಕಣಾ
ಎಲ್ಲರೂ ಸವಿವನಕ ತಣಿಯದವನು

ಎಲ್ಲ ಕಾಲದ ಜನರ ಎಲ್ಲ ದೇಶದ ಜನರ
ಎದೆಗಳಲಿ ಹರಿದಿರುವ ಒಲುಮೆ ಒಂದೆಂದು
ಎಲ್ಲ ಜನಗಳ ಮನದಿ ಮಲೆತಿರುವ ಭಾವಗಳು
ವೇದನೆಯು ರೀತಿಗಳು ಒಂದೆ ಎಂದು

ಯಾರೆಲ್ಲಿ ನೋಯುತಿರೆ ಬೇನೆವಡುವವನು ನೀನು
ಯಾರ ಸಂತಸದಲ್ಲು ಹರುಷಗೊಳುವವನು
ಯಾರೆಲ್ಲಿ ಸತ್ಯವನು ನಿಲಿಸುತಿರಲಲ್ಲಿಲ್ಲ
ಸಾರಿ ಸೇವೆಗೆ ಬಾಗಿ ಸೇರುವವನು.

ದೀನರನು ಆರ್ತರನು ನಿರ್ಬಲರ ಬಳಗವನು
ಸೋದರ್ಯರೆಂದೆಂದು ಕಾಯುವವನು
ಎದೆಕರಗಿ ಮನಮರುಗಿ ಕರುಣೆಯಲಿ ಕರೆಯುತ್ತ
ಅವರೆದೆಯ ಬೇಗೆಗಳನಿಳಿಸುವವನು.

ಅಶುಭದೊಡಲಲಿ ಶುಭವ ಹಿಂಡುತ್ತ ಹೀರುತ್ತ
ಶುಭದ ಸಾರವನೆರೆದು ಬೆಳಸುವವನು
ನಾಳೆಗೆಲ್ಲೆಲ್ಲಿಯೂ ಏಳ್ಗೆ ಬರಲೆನ್ನುತ್ತೆ
ಮೇಲ್ಮೆಗಳ ಬಿತ್ತುಗಳ ಬಿತ್ತುವವನು.

ಹೊರಗಿರುವ ರೂಪಗಳ ಭೇದಗಳ ಬಸಿರಲ್ಲಿ
ಎಲ್ಲೆಲ್ಲು ಮೊರೆಯುವುದು ಜೀವವೊಂದೆಂದು
ನಾ ಕಂಡೆ ನಿಮಗದನು ತೋರುವೆನು ಎನ್ನುತ್ತ
ತಿಳಿದ ಸಂತಸದಲ್ಲಿ ಮುದಿಸಿದವನು.

ಜಗದ ಸೌಖ್ಯದ ಸಿರಿಯು ಸವಿಗನಸು ಕಾಣುತ್ತೆ
ಮುದಿಮುದಿಸಿ ನಡೆಯಲ್ಲಿ ನೇಯುವವನು
ಬದುಕಿ ಬಾಳುವ ಆಸೆ ಬಾಳೆ ಬೆಳಗುವ ಆಸೆ
ಪ್ರೇಮೆಯಲಿ ನಿಲುವಾಸೆ ಕಲಿಸುವವನು.

—ವಿ. ಸೀ.

# ಕೈಮುಗಿವ ಗಾಂಧಿ

ಗುಂಡಿಟ್ಟು ಗೋಡ್ಸೆ ಸುಡುತಿರಲು ಅವಗೆ
ಕೈಮುಗಿದಿರೋ, ಗಾಂಧಿ !

ಕಾಲದಪ್ಪಣೆ ಕಡೆಗೆ ಬಂದಿತೆಂದರಿತು
ಮುಗಿದ ಕೈ ಮುಗಿದಂತೆ ಮೇಲೆತ್ತಿ ಹಿಡಿದಿರಲು
ಅಂತೆ ತೆರೆಯಿತು ನಿಮಗೆ ಜವರಾಯನೊಲವು.
ಇಳೆಯ ಹೊರೆಗಳು ಇಳಿಯೆ ಋಣ ಮುಗಿದು ಬಾಳು
ಹಗುರಾಯ್ತು.

ಘಾತಕನ ಕೊಲೆಕೋಪಿ ಗೋಲಿ ಕಾರುತ್ತಿರಲು
'ಒಂದಾದಮೇಲೊಂದು, ಒಂದೆರಡುಮೂರು !
ಕೋಪವೇ ನಿಮಗೆ ? ಅದುರಿತೇ ತುಟಿಯು ?
ಹಗೆ ತಣಿಯಲೆಂಬಂತೆ ಮನಸು ಸುಮನಸವಾಯ್ತು
ಪರಿಶಾಂತವಾಯ್ತು.

ಕಾಳಕೂಟವ ಶಿವನು ಕುಡಿದು ಜೀರ್ಣಿಸಿದಂತೆ
ನಾಡವಿಷವನು ಉಂಡು ಕೇಡ ಹೀರಿದಿರಿ.
ಹಿಗ್ಗಿದುದೆ ಧರೆ ಕೊಲೆಗೆ ? ಹಿಂಗಿತೇ ಋಣವವಗೆ, ನಮಗೆ ?
ಎಂತು ಹಿಗ್ಗೀತು ಹಗೆಯು ? ಎಂದು ಹಿಂಗೀತು ಋಣವು ?

೨

ಮೃತ್ಯುವಿಂದಮೃತತೆಗೆ ಏರಿದ ಮಹಾಪುರುಷ,
ನಿಮ್ಮೊತ್ತುಗೈಮುಗಿವ ದರ್ಶನವೆ ಕಾಲಕಾಲಕ್ಕು, ಇನ್ನು,

ನೆತ್ತರನ್ನುರಿಸುವುದು, ಬಗೆಬಯಲ ಎದೆಬಯಲನಾಕ್ರಮಿಸಿ
ಬಲಿದು.

ಹಗೆಗೆ ಮುನಿಯದು ನಿಮ್ಮ ಮನಸು,
ವಿರಸವನು ನಾಲಗೆಗೆ ತಾರದಿನಿಸು.

ಒಂದು ಬಾಳಿನ ಬೆಳಸು ಸಂಯಮದ ರೂಕ್ಷತೆಯು
ಶಾಂತಿ ಸೌಜನ್ಯವನು ರೂಢಿಸಿದ ನಿಮ್ಮಂಥ ಬದುಕು
ಇನ್ನೆಂದು ಬಂದೀತು ಬುವಿಗೆ ? ಬೇರೆಂತು ಬಂದೀತು ಬಸಗೆ ?
ಇಂತೆಯೇ ಕೈಯೆತ್ತಿ ಮುಗಿದು, ಮುಗಿದು,
ನಾಡ ಜನವನು ಬೇಡಿ ದಣಿವಿರ್ಪೆ ದಿನವೂ
ಹಗಲಿರುಳು, ಬಾಳಿನುದ್ದಕ್ಕು;-
ಕೇಳಿದರೊ ಒಳಿತು;—ಒಲಿಸಿ ನಡೆದಿರಿ ಮುಂದೆ
ಕೇಳರೋ ಅದು ಒಳಿತೆ; ನಿಲ್ಲದೆಯೆ ಕೈ ಮುಗಿವೆ
ನಡೆದಿರ್ಪೆ ಮುಂದೆ.

ನಿಮ್ಮವರ ನನ್ನಿಗರ ಹಿಂದು ಸಿಖ್ ಮುಸಲ ಹರಿಜನರ
ನಿರ್ಮೂಲವು ಧೀರ ಮಾನವತೆಯೇ ಅಡಿಗಡಿಗೆ ಕಾಡಿತ್ತು,
ಬೆನ್ನಟ್ಟಿ ಬೇಟೆಯಾಡಿತ್ತು.

ನೀವಟ್ಟಿ ಪಾರಾದರಾವ ಜನರು ?
ಸ್ಮಟ್ಸ್ ಆರ್ವಿನ್ ಆಟ್ಲೆ ಅಂಬೇಡ್ಕರ್ ?
ಪಾರಾಗಬಯಸಿದರು ಕೆಲಬರೆಮ್ಮವರೇ—
ಭಾರತದಿ ಸರಿಹಿರಿಮೆ ಸರುವರಿಗು ಸಲ್ಲದೆಂದವರು.
ಮೂರು ಲೋಕವು ಎಮ್ಮ ನಾಡೆಂಬುದಾರತೆಯು
ಭವ್ಯ ಕೋಲಾಹಲದಿ ಉಬ್ಬಿದಭಿಮಾನವನು

ಕ್ರೋಧ ಕಾರ್ಪಣ್ಯಕ್ಕೆ ಸನ್ನೆಸುವ ನರರು.
—ಭಾರತಕೆ ಸಲ್ಲದಿದು ನಡೆಯೆಂದು ಸಾರಿದಿರಿ.
ಸಂತಸವೊಡಂಬಡಿಸಿ ಒಲಿಸಿದಿರಿ
ಕೆಳೆವೆಸುಗೆಗಳ ಬೆಸೆದ ನಾಡ ಕಟ್ಟಿದಿರಿ
ಬಾನಿನೆತ್ತರಕದನು ನಿಲಿಸಿ ಹೊಂಗಳಸ ಮುಡಿಸಿ;
ಹಿಂಸೆ ಹಗೆತನದಿಂದ ಮಾನವಗೆ ವಿನಿಪಾತವೆಂದು ತೋರಿ
ಭಾರತದ ಶುಚಿ ಕೀರ್ತಿ ಕಂದದಿರಲೆಂದು ಕೋರಿ........

೪

ಎಂದಿಗೂ ಇದುವೆ ಕರೆ ಈ ನಾಡಿನಲ್ಲಿ
ಎಂದಿಗೂ ಇದೆ ಇದುವೆ ಎತ್ತಿದಾದರ್ಶ.
"ನಾನ್ಯಃ ಪಂಥಾ ವಿದ್ಯತೇಯನಾಯ,"
"ಮಾ ವಿದ್ವಿಷಾವಹೈ"—ಇದುವೆ ಆದೇಶ.
ಇನ್ನು ನುಡಿವವರಾರು ಮಿದುಬಗೆಯ ಬೆಳ್ಗಾಂತಿನುಡಿಯ
ಇನ್ನಾರೊ ನಡೆವರಾ ಬೆಳ್ಗಿಚ್ಚು ನಡೆಯ ?
ಬಲ್ಮೆಯಾಕ್ರೋಶಕ್ಕೆ ಮಣಿಯದಿಹ ಶಿರ ನಿಮತು.
ಬಲಿವನೌದಾರ್ಯಕ್ಕೆ ಕನಲ್ವ ಕ್ಷಾತ್ರ,
ಅಜಿನಡೆಗೆ ಆತಂಕವೊತ್ತು ಮಿಡೆಯಲ್ಲಿಲ್ಲ
ಎಂದಿಗೂ ಮುನ್ನಡೆವ ಸತ್ವದುತ್ಕರ್ಷ,
ಇನ್ನೆಂದು ಮರಳಿ ಕಂಡೀತು ಇಳೆಯು ?
ಕಂಡಾಗ ಮಚ್ಚರಿಸಿ ಕೊಲುವ ಇಳೆಯು.

೫

ನೂರಾರು ವರ್ಷಕ್ಕೆ ಸಾವಿರಕೆ ಎರಡಕ್ಕೆ
ಅಲ್ಲಿ ಏಸುಕ್ರಿಸ್ತ, ಇಲ್ಲಿವ್ಮ ಸಿದ್ಧಾರ್ಥ

ಸಂರಾಜಪುತ್ರ ಸುಭ್ರಾತೃ ಬಾಹುಬಲಿಯಂತೆ
ಭೂಮಿಗತಿಶಯದಂತೆ, ಸಗ್ಗದಿಂದಿಳಿದಿರೆಂಬಂತೆ
ಬಲವನೊಲವಿಗೆ ನೀವು ತಿರುಗಿಸಿದಿರಿ.
ಕ್ಷಮೆಗೆ ತ್ಯಾಗಕ್ಕೆ ತೇದಿರೊಡಲ.
ನಯದೊಳ್ಪನೇ ಬಳಸಿ ಕೈಚಾಚಿ ಬಾಚಿದಿರಿ ಬಳಿಗೆ.
ನರನಮರನಾಗಲಿಹ ದಾರಿಯದು ಒಂದೆ ಎನುತೆ
ಒಡಲು, ಮನ, ಎದೆಯಾಸೆ, ಅಧ್ಯಾತ್ಮಸಾರ
ರಕುತಗಳ ಆವೇಗ, ಕಣ್ಣುಕಿವಿಗಳ ತುಂಬಿ ಮೇರಿವರಿದು
ನಡೆನುಡಿವ ತೊಂಗುವಾ ಸುಮನೋವಿಲಾಸ—
ಈ ಒಂದೆ ಗುರಿಯ ಕಡೆ ನಡೆದರೇ ಸೊಬಗೆಂದಿರಿ
ಬಾಳಸಫಲತೆಯದುವೇ, ಅವೊಂದೆ ಬೆಳಕೆಂದಿರಿ
ಒಂಟಿತನವೇ,ಸೆರೆಯೊ, ಬೀರ್ಗಲ್ಲೊ, ಕೋವಿಯಂಜಿಕೆಯೊ
ತನ್ನವರಿ ಹೇರುತಿಹ ಅಪವಾದ ಭೀತಿಯೋ,ಖಾತಿಯೊ ?
ಕರೆಯುತಿಹ ಕವಿಸುತಿಹ ಶಾಪತಾಪಗಳೆ
ತಡೆನೆಿದು ನಿಮ್ಮ ಕೈ ಬಗ್ಗಿಸಿದವೆ ? ನಿಮ್ಮ
ತಲೆ ತಗ್ಗಿಸಿದವೆ ?

ನೀವೂಡುತಿಹ ಕೆಳೆಗೆ ಮಾರ್ಮಲೆದು ಜರೆದು
ವಿರಸವನು ಬಿತ್ತುತ್ತೆ ತೊಂಡು ನಡೆನಡೆದು
ಕೊಲೆಗೆ ಕೊಲೆಸಂತತಿಯನಿಡುವವರ ಬೇಡಿದಿರಿ
ಒಂದು ಸೂಳೊಲವಿಗೊಸಯೆಂದಿರಿ; ಕೈಯ
ಮುಗಿ ಮುಗಿದಿರಿ.
ಚೌರಿ ಚೌರದಲಿ ನವಖಾಲಿಯಲ್ಲಿ
ಬೀಹಾರದಲ್ಲಿ ನವದೆಹಲಿಯಲ್ಲಿ,

ಬಿಡುಗಡೆಗೆ ನಾಡನ್ನು ನಡೆಸಿ ಹೊಸ ಹಾಡ ಹಾಡಿಸಿದಿರಿ.
ಮಕ್ಕಳನು ಹೆಣ್ಗಳನು ಕೆಳಗೆ ಬಿದ್ದಾರ್ತರನು
ಮೇಲೆತ್ತಿ ಸಂತೈಸಿ ಬದುಕಿಸಿದಿರಿ
ನಯವ ಒಳಗಣ್ ತೆರೆದು ಸರಸ ಹಾಯಿಸಿದಿರಿ.
ಎಂದೆಂದು ಕಿವಿಗೆ ಕೇಳೀತು ನಿಮ್ಮದೇ
ಈ ಸಾಧು ನುಡಿಯು.
ಕಸ್ತೂರಿಯೆ ಕಂಡೀತು ಎಲ್ಲೆಲ್ಲು ಆ ಮುಗಿದ ಕೈಯು.
ಎದೆಯು ಸಂಕೋಚದಲಿ ಕಲ್ಲಾದ ಮಾನವತೆ
ಕರಗಿ ಹೊನಲಾಗಿಸುವ ಹಿರಿಯ ನಡೆಯೇ
ಇದುವೆ ನಿಮ್ಮುದಾರ ಚರಿತೆ; ಇದುವೆ ನೀವುತ್ತ ನೆಲನು
ನಿಮ್ಮನೇ ನೀವ್ಬಿತ್ತಿ ಬೆಳಸಿರುವ ಬೆಳಸು
ಬಾಳ ಚರಿತಾರ್ಥತೆಗೆ ಬೇರೆ ಪಥವೇನುಂಟು
ಓ ತಂದೆ, ಗಾಂಧೀ

ನಿಮ್ಮ ಋಣವೆಂದು ಮುಗಿದೀತು ಇಳೆಗೆ ?
ಭಾರತಕೆ ನಿಮ್ಮ ಋಣವೆಂತು ತೀರೀತು ?
ಆ ಬೆಳಗೆ ಬದುಕು ಮೈಯಿಕ್ಕುತಿರಲೆಂದು
ಆ ಬೆಳಕೆ ಬಾಳನ್ನು ಬೆಳಗುತಿರಲೆಂದು.
ನದಿಯಲ್ಲಿ ಕೂಡಲಲಿ ಕೊಳದಲ್ಲಿ ಸರದಲ್ಲಿ
ಕಡಲಲ್ಲಿ ತೀರ್ಥದಲಿ ನಾಡು ಹೆರನಾಡಿನಲ್ಲಿ
ಎಲ್ಲೆಲ್ಲು ಎರಚಿಹೆವು ನಿಮ್ಮ ಸತ್ವಾಂಶವನ್ನು.
ಗಾಳಿ ಸುಳಿವಲ್ಲೆಲ್ಲ ನಿಮ್ಮುಸಿರೆ ಕಮ್ಮುಸಿರು
ಜೀವನವು ನಮಗೆ.
ಹಸುರ್, ಚಿಗುರು, ಹೂ, ಕಾಯಿ, ಹಣ್ಣು

ಕಾಳು,ತೆನೆ,ಗೆಡ್ಡೆ,ಗೆಣಸು, ಕಾಳ್,ಕಬ್ಬು,ಜೇನು,ಮೆಣಸು
ಎಲ್ಲೆಲ್ಲು ಎಲ್ಲವೂ ತಿರುಳಿಟ್ಟು ಹೊರವಾಗುತಿರಲೆಂದು
ಕವಿಲೆಗಳ ಕೆಚ್ಚಲನು ತುಂಬಿ, ಕಾವಲಿನ

ಗರುಕೆ ಹೊನ್ನಾಗಿ

ಹಸುಮಕ್ಕಳೂಡುತಿಹ ತಾಯು ಹಾಲಾಗಿ
ಹೊಲಗದ್ದೆ ತೋಟಗಳ ತೆನೆಗೊನೆಗಳಾಗಿ
ಗೆಯ್ಮೆಗಳ ನಡಸಲಿಹ ಕೈಚಳಕವಾಗಿ
ಬಾನ್ ಕಡಲ ಕಾಯಲಿಹ ಕಲೆದಲ್ಮೆಯಾಗಿ
ಯಂತ್ರಗಳ ಮಂತ್ರ ತಂತ್ರಗಳ ಬೆಳಸು ಸೌಭಾಗ್ಯವಾಗಿ
ನೆಲ ನೀರು ಖನಿ ಬಾನು ನಾಡಿಗೊಲಿವಂತೆ
ನಿಮ್ಮಂಶವೀ ನಾಡ ಜಾಗರಿಸುತಿರಲಿ.
ಎಮ್ಮಾಸೆ ಫಲಿಸುವಂದದಲಿ ಎಮ್ಮ ಸಂತತಿಯು ಕಾಪಾಗಿ
ಇನ್ನೊಮ್ಮೆ ಭಾರತವು ಪರಿಶುದ್ಧವಪ್ಪಂತೆ
ಮುಗಿದ ಕೈ ತೆರೆದೆಮ್ಮ ಹರಸುತಿರಲಿ! ಹರಸುತ್ತಲಿರಲಿ!!

—ವಿ. ಸೀ.

# ಕಂಡದ್ದು ಮೂರುಸಲ

[ಗಾಂಧೀ ಜಯಂತಿ—೧೯೫೭]

ಒಂಬತ್ತು ವರುಷಗಳೀಚೆ ನಿಂತು ನೋಡುವೆ ನಾನು—
ನಿನ್ನ ಆ ಪೌರುಷವು ಧೀರವ್ಯಕ್ತಿತ್ವವನು.
ಮುಗಿಲ ಗೋಡೆಗೆ ಅದಿಗೊ ತೂಗುಬಿಟ್ಟಿದೆ ನೋಡು
ಬರೆದಿಟ್ಟ ಚಿತ್ರಪಟ,
ಮೇರುದಂಡದ ತುದಿಗೆ ಹಾರುತಿದೆ ಬಾವುಟ,
ನೆಲ ಕಡಲು ಜನಪದದ ಬದುಕೆಲ್ಲ
ಜೀವಂತ ಭೂಪಟ.
ಹಿಮಶೈಲ ಶಾಂತಿಯಲಿ ಜ್ವಲಿಸುತಿದೆ ಇದೋ
ಎದೆಯ ದೇಗುಲದಲ್ಲಿ ನಿತ್ಯನಂದಾದೀಪ
ನಿನ್ನ ರೂಪ!

*      *      *      *

ಕಂಡದ್ದು ಮೂರುಸಲ ನಾ ನಿನ್ನ :
ಮೊಟ್ಟಮೊದಲದೊ ಅಲ್ಲಿ,
ಹರೆಯದರಮನೆಯಲ್ಲಿ.
ತುಮುಲದ ಕಡಲು ನಿನ್ನೊಡಲು;
ತೆರೆಯಮೇಲಾಡಿತ್ತು ಹೊನ್ನಹರೆಯದ ಬಿಸಿಲು.
ಅಂತರ್ನಭದಿ ಮೊದಲಾಗಿತ್ತು

ಸದಸತ್ತುಗಳ ಗುಡುಗು.
ಸಂಶಯದ ಕಡಲಿನಲಿ ನೂರು ಪ್ರಶ್ನೆಯ ಹೆಡಗು !

ರುಗ್ಣಶಯ್ಯೆಯಲಿ ಮಲಗಿರಲು ತಂದೆ
ಹುಡುಗ ನೀ ಬಂದೆ.
ಕೈಯೊಳಗಿತ್ತು ತಪ್ಪೊಪ್ಪಿಗೆಯ ಪತ್ರ—
ತಂದೆಗೊಪ್ಪಿಸಿ ಕುಳಿತೆ.
ಹೊಯ್ದಾಡಿತ್ತು ಕಣ್ಣಿನ ಹಣತೆ.
ಕರಗಿತ್ತು ಕರುಣೆಯ ಮೇಘ ;
ಹನಿಹನಿಯಾಗಿ,ಜಿನುಗಿತ್ತು ತಂದೆಯೆದೆ-
ಯಿಂದಿಳಿದ ಕಂಬನಿಯ ಹರ್ಷವರ್ಷವಮೋಘ !
ಕಂಡಿತಾ ಕಂಬನಿಯ ಬೆಳಕಿನಲಿ ನಿನ್ನ ಜೀವನ ಮಂತ್ರ.
ಎದೆಯ ಕೊಳೆ ತೊಳೆದು ನೀ ನಿಂತೆ ನಿರ್ಮಲನಾಗಿ
ಯಜ್ಞ ದೀಕ್ಷಿತನಾಗಿ !

* * * *

ಮತ್ತೆ ಎರಡನೆ ಬಾರಿ, ನಾ ಕಂಡೆ ನಿನ್ನನಾ
ಆಫ್ರಿಕದ ಕಗ್ಗತ್ತಲಲ್ಲಿ:
ನಟ್ಟನಡುವಿರುಳಲ್ಲಿ ಎಸೆದು ನಡೆಯಿತು ರೈಲು
ಯಾವುದೋ ನಿಲ್ದಾಣದಲ್ಲಿ.
ಹಾಸುಗಂಬಿಯಮೇಲೆ ಉರುಳಿಹೋದುವು ರೈಲು
ಆ ಇರುಳೆಲ್ಲ, ಮೈಲು ಮೈಲು.
ಏನು ? ಮುಂದೇನು ?
ಪ್ರಶ್ನೆಗಳ ಹೆಡೆಯನೆತ್ತಿತು ಬಾನು :

"ಗಂಡುಸಾದರೆ ನಿನ್ನ ಬಲಿಗೊಡುವೆಯೇನು ?"
ಮೊಳಗಿತ್ತು ನಿರ್ಧಾರ
ಹುತ್ತ ಬೆಳೆಯಿತು ಪೂರ.
ಛಳಿ ; ಕೊರೆವ ಛಳಿಯಲ್ಲಿ ಕುಳಿತನು ಬುದ್ಧ
ನಡುಗುಚಿಕ್ಕೆಯ ಇರುಳ ಮರದ ಕೆಳಗೆ.
ಆಫ್ರಿಕದ ಕಗ್ಗತ್ತಲೆಸೆಯಲ್ಲಿ ಹೊಳೆದಿತ್ತು
ಭಾರತಿಯ ಬಿಡುಗಡೆಯ ಬೋಧಿ !

ಎದ್ದೆ—
ಮೈತುಂಬಿ ಎದ್ದೆ, ವಿದ್ಯುತ್ ತರಂಗವಾಗಿ ಬೀಸಿದೆ ನೀನು
ಹಿಮಾಲಯದಿಂದ ಕನ್ಯಾ-
ಕುಮಾರಿಯ ತನಕ ಪ್ರಚಂಡವಾಗಿ !
ಏರಿದುವು,' ಹಾರಿದುವು, ಬಣಗು ತೃಣಕಣವೆಲ್ಲ
ಬ್ರಹ್ಮಾಸ್ತ್ರವಾಗಿ.
ಮಣ್ಣ ಕಣಕಣವೆಲ್ಲ ಮೈದುಂಬಿ ಕೂಗಿತೊಕ್ಕೊರಲಲ್ಲಿ :
"ಕ್ವಿಟ್ ಇಂಡಿಯಾ...."
ಹೂವಿನ ಹಿಡಿಗೆ ಕಬ್ಬಿಣವೆಲ್ಲ ಕರಗಿ ನೀರಾಯ್ತು !
ಕೆಂಪು ಬಾವುಟವಿಳಿದು, ತಂಪು ಬಾವುಟವೇರಿ
ಬಾನು ಬೆಳಗಾಯ್ತು.
ಕಡಲ ನೀಲಿಯನೀಸಿ ಸಾಗಿಹೋದವು ನೂರು
ಕೊಕ್ಕರೆಯ ಹಡಗು.
ಜೇಡಬಲೆ ಮೋಡಗಳ ಗುಡಿಸಿ ಕಳೆಯಿತು ಗಾಳಿ;
ಪಾಚಿಗಳೆದಾ ಕೊಳದಿ ಹೊಳೆವ ಮೀನಿನ ಕೇಳಿ ;

ಗುಡಿ ಗುಡಿಯ ಘಂಟೆಯಲಿ ಹೊಮ್ಮಿತ್ತು ಜಯಘೋಷ
ಇರುಳ ಹೊಂಗನಸೆಲ್ಲ ನನಸಾಗಿ
ಜನತೆಯ ತೇರು ಸಿಂಗರವಾಗಿ
ಮೊದಲಾಯ್ತು ಹೊಸ ಯುಗದ ಜಾತ್ರೆ.
ಜಾತ್ರೆಯುತ್ಸಾಹದಲಿ ನಿನ್ನ ನಾ ಮರೆತೆ !

* * * *

ಮತ್ತೆ ಮೂರನೆಬಾರಿ, ನಾ ಕಂಡೆ
ಸ್ವತಂತ್ರ ಭಾರತದ ಜನಸಮುದ್ರದ ತಡಿಯ
ಪ್ರಾರ್ಥನಾ ಸ್ಥಲದಲಿ.
ಮೂರು ಸಿಡಿಗುಂಡುಗಳ ಸ್ಫೋಟ ಸಂದಿತು ಎದೆಗೆ.
ಪಂಜರ ಬಿರಿದು, ರಾಮರಾಮಾ ಎಂದು
ಹಕ್ಕಿ ಹಾರಿತು ಹೊರಗೆ,
ತನ್ನ ಮನೆಗೆ.
ಶಿಲುಬೆಯಲಿ ಕ್ರಿಸ್ತನಿನ್ನೂ ನಿಂತು ಹೇಳುವ ಮಾತು
ಕೇಳಿತು ಕಿವಿಗೆ: 'ಕ್ಷಮಿಸು ತಂದೆ ಕ್ಷಮಿಸು
ಇವರ ಕನಿಕರಿಸು'

ನೊಂದು ನುಡಿದಿತ್ತು ಕವಿವಾಣಿ :
' ಮತ್ತೆ ಇದೇನು !
ಎಂದೆಂದಿಗು ನಿನಗಿದೆಗತಿಯೇನು ?'
ನಾನೆಂದೆ : ' ಎಂದೆಂದಿಗು ನಮಗಿದೆಗತಿಯೇನು ?'

* * * *

ಒಂಬತ್ತು ವರುಷಗಳೀಚೆ ನಿಂತು ನೋಡುವೆ ನಾನು,
ನೀ ತಂದ ಬೆಳಕಿನಲಿ ಖಿನ್ನನಾಗಿ.

ಮತ್ತೆ ಬಿದ್ದಿವೆ ಇದೋ, ಅಂದೆದ್ದ ತರಗೆಲೆ ಕಡ್ಡಿ
ದಿಕ್ಕುಪಾಲಾಗಿ.
ಅಲ್ಲೊಂದು ಇಲ್ಲೊಂದು ನಿಂತಿಹವು ದೀಪಸ್ತಂಭ
ನಿನ್ನ ಬೆಳಕನೆ ಹೊತ್ತು ಮುಡಿಯುತುಂಬ !
ನಂಬಿರುವೆ : ಮೂಡಿಯೇ ಮೂಡುವುದು
ಶಾಂತಿಸರ್ವೋದಯದ
ಚಂದ್ರಬಿಂಬ !

—ಜಿ. ಎಸ್. ಶಿವರುದ್ರಪ್ಪ



## ಗಾಂಧಿ

ಇಳೆಗೆ ಅಹಿಂಸೆಯ ಪರಮ ತತ್ತ್ವವನು ತೋಳೆತ್ತಿ
ಉಸಿರ ಬಲವುಳ್ಳನಕ ಸಾರಿದ ಗುರು;
ದರ್ಪವನು ಧೈರ್ಯದಲಿ, ಶಸ್ತ್ರವನು ಸಹನೆಯಲಿ,
ಶಠತೆಯನು ಸತ್ಯದಲಿ ಜಯಿಸಿದ ಕಲಿ;
ಹುಡಿಯ ಹುಳುಗಳನೆತ್ತಿ ವಜ್ರ ಹೃದಯವ ಬಿತ್ತಿ
ವೀರ ಜನ್ಮವನಿತ್ತ ಹಿರಿಯ ತಂದೆ;
ನೆಲದ ನಡೆವಳಿಕೆಯಲಿ ನಾಕದೌನ್ನತ್ಯವನು
ಮೇಳವಿಸಿ ತೋರಿದ ಪವಾಡಪುರುಷ:
ಪ್ರೇಮ ಸಂಸ್ಥಾಪನೆಯ ವಿಶ್ವಜಿದ್ಯಜ್ಞದಲಿ
ಪ್ರಾಣ ಪೂರ್ಣಾಹುತಿಯನಿತ್ತ ದಾನಿ;
ಭಾರತದ ಭಾಗ್ಯರವಿ; ದೀನದಳಿತರ ರಕ್ಷೆ;
ವಿಮಲ ಧರ್ಮದ ವಾಣಿ; ಜನತೆಯಂತಃಸಾಕ್ಷಿ;
ಸರ್ವೋದಯದ ಸೂತ್ರಧಾರ ಗಾಂಧಿ !

—ತೀ. ನಂ. ಶ್ರೀಕಂಠಯ್ಯ

# ರಾಷ್ಟ್ರಪಿತಾಮಹ

ಈತನಭಿನವಬುದ್ಧ ನೀತಕಾರಣಪುರುಷ,
ಸೋತು ಗೆಲುವ ವಿದಗ್ಧ ಸಂಪ್ರಬುದ್ಧ ;
ಭೀತರನು ಕಾವ ನಿರ್ಭೀತಾತ್ಮನೀತ ನವ-
ನೀತ ಕೋಮಲ ಹೃದಯ, ಸವ್ಯಸಿದ್ಧ !

ಸ್ವಾತಂತ್ರ್ಯ ಸಮರಪಂಡಿತ, ಸರ್ವಧರ್ಮಸಹ-
ನಾ ತತ್ವಮಂಡಿತ, ವದಾನ್ಯವರ್ಯ ;
ಭೂತಭೌತಿಕ ಕಾರ್ಯಕಾರಣ ಕಲಾವೇತ್ತೃ,
ನೂತನವಿಭೂತಿ, ನರಲೋಕದಾರ್ಯ !

ಭಾರತದ ಭಾಗ್ಯಚಕ್ರವ ತಿರುಗಿಸಿದ ತಂತ್ರ-
ಸಾರ, ಸರ್ವೋದ್ಧಾರ, ಸತ್ಯಪೂರ;
ದೂರದರ್ಶನ, ಮುಗ್ಧಹಾಸ, ಮೋಹನದಾಸ,
ಆರುಹಗೆಗಳ ಗೆದ್ದ ಶಾಂತವೀರ !

ಹಿಡಿದು ಸತ್ಯಾಹಿಂಸೆಯಸ್ತ್ರಗಳ ದುರ್ಮನರ
ಕೆಡೆದ ಕದನಕಪಾಲಿ, ಕರ್ಮಯೋಗಿ ;
ನುಡಿದಂತೆ ನಡೆವ ನವದೇವಮಾನವ, ನಮ್ಮ
ಜಡೆಯಿರದ ತಪಸಿ; ದಿವ್ಯಾನುರಾಗಿ ।

ಈತ ಯುಗಪುರುಷನೆಂದೆನಿಸಿ ಬಾಳಿದ ದೇವ-
ಗೀತ ಯಶನಾಗಿ ಭಾರತವಿಧಾತ;
ನೀತಿನಭದುತ್ತ್ರಭದಿವಾಕರ, ನವೀನಮನು-
ಪೀತ ಪಾವನಚರಿತ ಶಾಂತಿದೂತ !

—ಬ. ಹೆ. ಶ್ರೀಧರ

# ಗಾಂಧಿಯವರ ದರ್ಶನ

ಇಂದು ನಮ್ಮ ಮಹಾತ್ಮ
ಗಾಂಧಿಯನು ನೋಡಲಿಕೆ
ಬಂದೆವಿಲ್ಲಿಗೆ ಲೋಕ
ಬಾಂಧವನ ದರುಶನಕೆ

ಜನದ ಸೇವೆಯಲಿ ಮೆಯ್
ಸೋತನಿವನೆಂದರು
ಅನುಮಾನ ಬರಿದು ಇದು
ಭೀತಿಬಹುಬರಿದು

ಸೋತವನ ಮೆಯ್ಯೆ ಇದು ?
ಅಲಸಿದನೆ ಇವನು ?
ಈತ ಸೋತಿಹನೆನಲು
ಗೆಲಿದವರು ಎಲ್ಲಿ ?

ಎಳೆಯ ಮಗುವಿನ ಮೊಗದ
ನಗೆಯಿಹುದು ಮೊಗದೆ ;
ಇಳೆಯರಸರಿಗೆ ಬರದ
ಬಗೆಯ ಗಾಂಭೀರ್ಯ;

ಅನುಜರೊಡನಾಡುತಿಹ
ಹಿರಿಯಾನುರುಸರಸ;
ಮನುಜರಾಟವ ನೋಡಿ
ಕರಗಿರುವ ಕರುಣೆ;

ತಾಪಸ ವೃತ್ತಿಯಲಿ
ಘನಿಸಿರಲು ತೇಜ
ದೀಪವೋ ದೇಹವೋ
ಎನಿಸುತಿಹ ಒಡಲು.

ಸೋಲೆಂಬ ಮಾತಂಟೆ
ಕದನವು ವೀರನಿಗೆ?
ಮೇಲಿಮೇಲ್ಮೇಲಲ್ಲೆ
ಹರಿಯದಾಸರಿಗೆ?

ಹರಿಯ ಹಿರಿಯಾಳಿವನು
ಗಾಂಧೀ ಮಹಾತ್ಮ.
ಕರುಣಿಪನು ಹರಿ ತನ್ನ
ಬಾಂಧವಗೆ ಶುಭವ.

ಸಾಕು ಸದ್ಯಕೆ ಸೇವೆ
ಎಂದು ಹರಿ ಇವನ
ಬೇಕೆಂದೆ ಕುಳ್ಳಿರಿಸಿ
ನಿಂದಿಹನು ಕೆಲದೆ.

ಬಿಡುವ ಕೇಡೆಂದೆನುವ
ಮರುಳತನ ಒಂದು
ಕಡೆಗಿರಲಿ; ಬಂದೆಲ್ಲ
ಎರಗಿ ಹಿರಿಯನಿಗೆ.

ಭಾರತಮಾತೆಯ ಹಿರಿಯ
ಕುವರನಿಗೆ, ಹರಿಯ
ಹಿರಿಯ ದಾಸಗೆ, ಬಂದು
ಇವನಿಗಿಂದೆರಗಿ.

ಇವನ ಧರಿಸಿದ ಭೂಮಿ
ಪುಣ್ಯಭೂಮಿ ಇದು;
ಇವನ ನೋಡಿದ ನಾವು
ಧನ್ಯರಾವಿಂದು.

—ಶ್ರೀನಿವಾಸ

# ಬಾಷ್ಪ-ಪುಷ್ಪ

ಏನಿದೀ ದುರ್ವಾರ್ತೆ! ಮೈ ನವಿರು ನಡುಗಿದುದು
ವಿಶ್ವದಾದ್ಯಂತವೂ! ಕಣಕಣವೊಳಿಡು ದುದು
ಪ್ರಳಯ-ದುಃಖ-ಜ್ವಾಲೆ! ನೆಲ ಮುಗಿಲ ಪರ್ವಿದುದು
ಕಣ್ಣೀರ ಕಡಲುಕ್ಕಿ! ಒಳಗೊಳಗೆ ಕೊರ್ವಿದುದು
ಶೂನ್ಯತನುಶೂನ್ಯ! ಹಾ! ಗಾಂಧೀಜಿ ಮಡಿದನೇ
ಗುಂಡಿಗಾಹುತಿಯಾಗಿ! ಸತ್ಯವನಹಿಂಸೆಯನು
ಶಾಂತಿ-ಕರುಣಾ-ಕ್ಷಮಾ-ಶುಭ್ರಾಭ್ರ-ಹಂಸಿಯನು
ತಾನೇರ್ದ ನರ-ಬ್ರಹ್ಮ ಮೈಗರೆದು ನಡೆದನೇ?
ನಾನಾ ಪ್ರಯೋಗಗಳ ಭವರಂಗದಲಿ ಗೈದು
ತ್ಯಾಗಪಥದಲಿ ದಿವ್ಯಮಾನವತೆಯನೆ ನೆಯ್ದು
ದೆಸೆವೆಸೆಗೆ ಪಸರಿಸುತೆ, ಹೃದಯಗಳ ಕುಸುರಿಸುತೆ
ಲೋಕಸೇವಾಭಾವ ದೀಪ್ತಿಯನ್ನೊಸರಿಸುತೆ
ಆ ಮಹಾಮಾನವತೆಯಂಬರಕೆ ತಾನೇರಿ
ಹೋದ! ಹಾ! ಹೃತ್ತಪಸ್ಸಂಪದವನೆಲೆ ಬೀರಿ!

೨

ವ್ಯವಹಾರ-ವೇದಾಂತ-ರಾಜಕಾರಣಗಳನು
ನೆರೆ ತೂಗಿ ಸಮ್ಯಕ್-ಸಮನ್ವಯ-ಸುದೃಷ್ಟಿಯಲಿ
ಸ್ವಾತಂತ್ರ್ಯ-ಸಾಮ್ಯ-ಸುಖ-ಶಾಂತಿ-ತಾರಣಗಳನು
ನಾಳೆ-ನಾಳದಿ ತುಂಬುತಾದರ್ಶ-ಪುಷ್ಟಿಯಲಿ

ಯುಗಯುಗಾನಂತರದಿ ಮಾರ್ಪೊಳಿವ ಸೃಷ್ಟಿಯನು
ವಿರಚಿಸಲು ಯತ್ನಿಸಿದ ವ್ಯವಹಾರಯೋಗಿಯೇ,
ಹೋದೆಯಾ? ಇನ್ನೆಲ್ಲಿ? ಅನುಕಂಪವೃಷ್ಟಿಯನು
ಕರೆದ ಆ ಸೊಲ್ಲೆಲ್ಲಿ? ಸರ್ವಸ್ವತ್ಯಾಗಿಯೇ!
ದಲಿತ-ಜನ-ಹೃದಯವೇ, ವಿಶ್ವಧರ್ಮೋದಯವೆ,
ಸರ್ವಾತ್ಮ! ಸಕಲಾತ್ಮ! ವಿಮಲಾತ್ಮ! ಪ್ರೇಮಾತ್ಮ!
ಸರಳಾತ್ಮ! ಸುಭಗಾತ್ಮ! ವಿಶ್ವಾತ್ಮ! ದೇವಾತ್ಮ!
ಓ, ಮಹಾತ್ಮಾಜಿಯೇ, ಬಾಪೂಜಿ, ಸದಯವೇ!
ನೀನು ಅಂಬರಕೇರೆ, ಭೂತಳದ ಭಾರತಿಯು
ಕಂಗೆಟ್ಟು ನಿಂತಿಹಳು, ತೀಕ್ಷ್ಣದುಃಖಾಹತೆಯು!

೩

ನೀನು ಸಾಧಿಸಿದತುಲ ದೇವಮಾನವ ಪದಕೆ
ಉತ್ತುಂಗ-ಗಿರಿ-ಶ್ರೇಣಿ-ಸಾನುಗಳು ಬಾಗಿಹವು!
ನಕ್ಷತ್ರ-ಗ್ರಹ-ಕೋಟಿ-ಭಾನುಗಳು ತೂಗಿಹವು!
ಕಡಲಾಳ, ಮುಗಿಲಗಲ ನಾಚಿ ಕಳೆಸೋಗಿಹವು!
ಕಲ್ಪತರು-ಕಾಮಧೇನುಗಳು ಬರಡಾಗಿಹವು!
ವಜ್ರಬಂಧನದಲ್ಲಿ ಮುಕ್ತಿ ಸಂಚರಿಸಿಹುದು!
ಕತ್ತಲೆಯು ಬಗೆಗರಗಿ ಬೆಳಕನೇ ಪರಿಸಿಹುದು
ನೀ ಪಡೆದ ನಿಸ್ಸೀಮಹೃದಯಘನಸಂಪದಕೆ!
ತೆರೆಮರೆಯೊಳಿಹ ಗಾಯಕನ ನಿತ್ಯ-ಗೀತದೊಲು,
ದೂರಸ್ಥ ಮುರಲಿಯಾ ಮಧುರಸಂಗೀತದೊಲು,
ತಾಯಿಯೆದೆಮರೆಯೊಳಿಹ ಪ್ರೇಮ-ನವನೀತದೊಲು,
ಬಾನುಲಿಯ ಕೇಂದ್ರದಿಂ ಹರಿವ ಸ್ವರಸ್ರೋತದೊಲು,

ನೀ ನಡೆದು ತೋರ್ದ ಘನ-ತತ್ವಗಳ ಬೆಳ್ವೆಳಗು
ಅಶರೀರ ವಾಣಿಯಲಿ ಹರಿಯುತಿಹುದೆಲ್ಲೆಡೆಗು !

೪

ಬಹುದು ! ಇರಬಹುದು ! ಅತಿಮಾನವಾರ್ಹತೆ ?
ಕಟು-ಕಠಿಣ-ಬಹುಜಟಿಲ ಪಾವಕಪರೀಕ್ಷೆಯದು !
ಶಿಲುಬೆಯಾ ನಂಜಿನಾ ಗುಂಡಿನಾ ದೀಕ್ಷೆಯದು !
ಹಾ ! ಹಾ ! ಅಹಿಂಸೆಯನೆ ಸಾಧಿಸಿದ ಸನ್ಮತಿಗೆ
ಲೋಕೋತ್ತರಂಗೆ ಹಾ ! ಗುಂಡಿನಾಘಾತವೆ ?
ಕುಸುಮ-ಹೃದಯಕೆ ಕೊನೆಗೆ ವಜ್ರಸಂಪಾತವೇ ?
ಸಂಕುಚಿತ ದೃಷ್ಟಿಯಲಿ ಅವುದಿದೆ ಮರಣವೋ
ಅದು ಊರ್ಧ್ವಗತಿಗೊಯ್ವ ಬೆಳಕಿನಾವರಣವೋ !
ಇಂತಿರಲು, ಗಾಂಧಿತಂದೆಯು ಮಡಿದನೆಂಬರೇ ?
ಅಗ್ನಿದೀಕ್ಷೆಗೆ ಸಂದು ಪರಿಪೂತಜಯಶಾಲಿ-
ಯಾಗಿರಲು, ಸಂತತಂ ಕಣ್ಣೀರನುಂಬರೇ ?
ಓರ್ವನಿದ್ದಿಹ ಗಾಂಧಿ ಮುಂದಿನ್ನು ಸಲ್ಲೀಲೆ-
ಯನು ಮೆರೆವ ಶತಕೋಟಿ ಗಾಂಧಿಯಲಿ ಪರಿಣಮಿಸಿ
ಕಣ-ಕಣದಿ ಮನ-ಮನದಿ ಮೂಡುವನು ಸಂಭ್ರಮಿಸಿ

೫

ಘನ-ವಸ್ತು ! ಘನ-ಕೃತಿಯು ! ಘನ-ದೃಷ್ಟಿ ! ಘನ-ಸೃಷ್ಟಿ !
ಘನ-ತ್ಯಾಗ ! ಘನ-ಯೋಗ ! ಘನ-ತತ್ವ-ಸಂತುಷ್ಟಿ !
ಆಕಾಶಲೀಲೆಗಿದೋ ಪರಿಮಿತದ ಸೀಮೆಯೇ ?
ಕಡಲಾಳದುಬ್ಬರಕೆ ಸಂಕುಚಿತದ ಭೂಮಿಯೇ ?
ಧವಳಗೌರೀಶಂಕರೋತ್ತುಂಗ ಶಿಖರಕ್ಕೆ
ಹಿಮಗಿರಿಯನುಳಿದಾವ ದಿಣ್ಣೆಗಳ ಆಧಾರ ?

ಧವಳಿಮಾಜಾಹ್ನವಿಯ ತೀವ್ರಗತಿ ಪ್ರಖರಕ್ಕೆ
ಹರಿ-ಹರ-ಭಗೀರಥರನುಳಿದಾವ ಸಿಥಾರ?
ಲೋಕ-ವಿಸ್ತಾರವೇ ಗಾಂಧಿ-ಲೀಲಾ-ರಂಗ!
ಆಕಾಶವಾತ್ಮದಲಿ ಬಹುಮುಖದಿ ಮೇಳೈಸ್ದು
ಬಗೆಬಗೆಯ ದೃಶ್ಯ-ಪ್ರಯೋಗಗಳ ತಾ ಸಮೆದು
ಚಿರ-ಯೋಗ-ನಿಶ್ರೇಯಲಿ ಮಲಗಿಹನು ಘನಸಂಗ!
ಓ, ಅಹಿಂಸಾ-ಸತ್ಯ-ಶಾಂತಿ-ಚಂದನ-ಜ್ಯೋತಿ
ಕಂಪಿಡಿದು ಬೆಳಗುತಿದೆ ಬಾಂಬರಂ ಚಿರಖ್ಯಾತಿ!

೬

ಆ ಕಂಪ ಬೆಳಕಿನಲಿ ಹೂವರಳಿ ಮೆರೆಯುತಿವೆ!
ಹೊಳೆಹಳ್ಳ ಕಡಲುಗಳು ಕುಡಿಕುಡಿದು ಮೊರೆಯುತಿವೆ!
ಗಾಳಿಯಾಸ್ವಾದಿಸುತೆ ಕಮ್ಮನೇ ತೀಡುತಿದೆ
ಬಿಸಿಲದರೊಳೊಂದಾಗಿ ಲೀಲೆಯಲಿ ಆಡುತಿದೆ
ಘಟ್ಟಗಳು ಬೆಟ್ಟಗಳು ದರಿಕೊಳ್ಳ ನಿಟ್ಟುಗಳು
ಅದನೆ ಪಡಿನುಡಿನುಡಿಯುತಿವೆ ತಪದ ಮೆಟ್ಟುಗಳು
ಬುವಿಯ ಜಡದಲಿ ಜೀವನಾಡಿ ಕಣ್ ಹರಿಸುತಿದೆ
ಆಕಾಶಮೌನದಲಿ ಪರಮಾತ್ಮ ಸ್ಫುರಿಸುತಿದೆ
ಚಿನ್ನಸೃಷ್ಟಿ-ಆತ್ಮಸೃಷ್ಟಿಗೆ ಇದರ ಪ್ರತ್ಯಯವು
ಕಣ್ಣಿರ್ದು ಕುರುಡ ಜನಕೆಲ್ಲ ಬರಿ ವ್ಯತ್ಯಯವು
ಹೃದಯಶುದ್ಧಿಯ ಮೇಲೆ ಸರ್ವಸಾಧನೆ ಸಿದ್ಧಿ
ಇದನುಳಿದ ಸಾಧನೆಗಳೆಲ್ಲವೂ ಬರಿ ಗುದ್ದಿ
ಏನು ಲಾತ್ಮನಿರ್ಣಯಾ? ಅಂತಾದೊಡಿಲ್ಲಿ ಬಾ
ಬಾಷ್ಪ ಪುಷ್ಪವ ಸಲಿಸಿ ಧನ್ಯತೆಯ ಹೊಂದ ಬಾ!

—ಈಶ್ವರ ಸಣಕಲ್ಲ

## ಅಭಯ ದೇವ ಗಾಂಧಿ

೧

ತಾಂಡವ ನೃತ್ಯ ನಭೋ ಮಂಡಲವು
ಬಾಂಬರ ಬರ್ಬರ ಯಾನ ವಿಮಾನ
ಕೆಂಡಂಗಳ ಸುಡುಗಂಗಳ ನೋಟ
ಖಂಡಿತ ಕಲ್ಕಿಯ ಕಾಟವೆ ಕಾಟ !

೨

ಪಾವಾನಲ ಸಂಹಾರಕ ಶಕ್ತಿ
ಧಾವಿಸಿ ಮೀರಿದ ಯಾಂತ್ರಿಕ ಯುಕ್ತಿ
ಭಸ್ಮೀಕೃತ ಭೂವಲಯದ ಶೇಷ
ವಿಸ್ಮಯಗೊಳಿಸಿದೆ ವಿಕೃತ ವಿಶೇಷ

೩

ಪೃಥಿವಿಯ ಪಾರ್ಥಿವ ತಂತ್ರದ ಪರಿಗೆ
ಇತಿಮಿತಿಯಿಲ್ಲವೆ? ಚ್ಯುತಿಮತಿಭ್ರಾಯ್ತು?
ಮತಿಯುತ ಮಾನವರಿಲ್ಲವೆ ಪುಡಿಗೆ ?
ಸ್ಥಿತಿಗತಿ ತೋರಿಹನೊಬ್ಬನೆ ಗಾಂಧಿ !

೪

ಸತ್ಯಾಗ್ರಹ ಸಂಗ್ರಾಮದ ಸ್ಥಿತಿಗೆ
ಮಿಥ್ಯಾಚಾರ ಮನೋವ್ಯಥೆಯಿಲ್ಲ
ಸತ್ಯ ಪರಾಯಣ ಕಾರಣ ಪುರುಷ
ಸತ್ಯಾಗ್ರಹದಲಿ ಕಾಣುವ ಹರುಷ

೫

ಭಾರತ ಸ್ವಾತಂತ್ರ್ಯದ ಸುಖ ಸಿರಿಗೆ
ಧಾರಿಣಿ ದಾಸ್ಯದ ಧ್ವಂಸದ ದೆಸೆಗೆ
ಸಾರಿದ ಸತ್ಯಾಗ್ರಹ ಸಂಗ್ರಾಮ
ಮೀರಿದ ಸತ್ಯಸುಧಾಕರ ಧಾಮ

೬

ಭೂಮಂಡಲ ಮಂಡನ ಭಾರತಿಯು
ಹೋಮೋಜ್ಜೀವಿತ ಋಷಿಮುನಿ ಸುತೆಯು
ತಾಮಸ ಸೃಷ್ಟಿ ಸಂಹಾರಕ ಶಕುತಿ
ಭಾರತ ಸಂಸ್ಕೃತಿ ಜಗಕಿದು ಜ್ಯೋತಿ

೭

ಭಾರತಿಗಭಯ ವಿಧಾತನು ಗಾಂಧಿ
ತೋರಿಹ ಧಾರಿಣಿಗೆಲ್ಲ ಸುಸಂಧಿ
ಬನ್ನಿರಿ ಭಾಗ್ಯ ವಿಧಾತನ ಕರೆಗೆ
ತನ್ನಿರಿ ತನುಮನ ಅಭಯದ ನೆರೆಗೆ

—ಗಾಂವಕರ ಸಣ್ಣಪ್ಪ

# ಕ್ರಿಯಾಸ್ಮೃತಿ *

ಇದು ಪ್ರದರ್ಶನವಲ್ಲ, ದರ್ಶನ; ದಿವ್ಯ ಜೀವನ ದರ್ಪಣ
ಮನುಜನುಪಕೃತಿಸ್ಮೃತಿಗೆ ಪ್ರಕೃತಿಯು ನೇತ್ರಜಲಸಂತರ್ಪಣ!
ದಯೆಯ ದೀಪಸ್ತಂಭ ಕಳಚಿರೆ, ಕಾಜು ಪುಡಿಪುಡಿಯಾಯಿತೆ
ಇಲ್ಲಿ ಹುಲ್ಲಿನ ಮೇಲೆ ಹನಿಗಳು ದೀಪ ಬೆಳಗುವುದಾಯಿತೆ!

ಏನು ಎತ್ತರದೇನು ಬಿತ್ತರ ಆ ಮಹಾತ್ಮರ ಸಾಧನೆ !
ನೆನೆದುಕೊಂಡರೆ ಕುದಿವುದೆದೆ ಮೇಣ್ ಕರುಳು
ಕೊರೆವುದು ವೇದನೆ
ಏನು ನುಡಿವುದೊ–ತುಟಿಯೆ ತೆರೆಯದು–ಮೌನ ಮೌನಕೆ
ಬಾಗಿರೆ
ಶಿಲೆಯ ಅಡಿಯೊಳೆ ಶಿಲ್ಪಿ ಮಲಗಿರೆ, ಸ್ಮೃತಿಯೆ
ವಿಸ್ಮೃತಿಯಾಗಿರೆ !

ತಡೆದು ಹಿಡಿದರು, ಒಡೆದ ಕಾಲುವೆಯಾಗಿ ಹರಿವುದು ಕಂಬನಿ
'ನಿನಗನಿತೆ ದುಃಖವೆ? ಲೆಕ್ಕವಿಲ್ಲದೆ ನಿತ್ಯ ಸುರಿಯುವೆನಿಬ್ಬನಿ!'
ಮುಗಿಲ ಸೊಲ್ಲಿಗೆ ಹಗಲು ಕೂಡಾ ಬೆಚ್ಚಿ ಗದಗದ ನಡುಗಿದೆ;
ದಿಟದ ದಾರಿಗೆ ಎಂಥ ಕೊನೆ ಹಾ! ಮಂಜಿನಲಿ ಪ್ರಭೆ ಅಡಗಿದೆ

* ರಾಷ್ಟ್ರಪಿತನ ಸಮಾಧಿಯನ್ನು ಸಂದರ್ಶಿಸಿದಾಗ—

ಬಾಗಿ ನಿಂದರೆ ಬಾಗಿಲಾಗದು; ಕದಕೆ ಕೊಂಡಿಯು ಸರಪಳಿ
ಬೇಕು–ಮುಗಿಲಿಗೆ ನೆಲದ ನೆಂಟಸ್ತಿಕೆಯು ಬೆಳೆಸುವ ಕಳಕಳಿ !
ಇಲ್ಲಿ ವಿಶ್ರಮಿಸಿರುವ ವಿಶ್ವದ ಚೇತನಾಂಶದ ಪ್ರತಿಧ್ವನಿ
ಕೇಳಿ ಕನಿಕರಬಟ್ಟು ಕಂಬನಿ ಸುರಿವಳಕಟಾ ಧಾರುಣಿ !

ಯಾರು ಯಾರಿಗೆ ಸುಮ್ಮನಿರಿ ಎಂದೊರೆವುದಿದೆ ಈ ಹೊತ್ತಿಗೆ?
ಸುಮ್ಮನಿದ್ದರೆ ಶಾಂತಿ–ಸುಖಗಳು ಸ್ವಪ್ನದೊಳೆ ಸುಪ್ಪತ್ತಿಗೆ !
ಉರದಿ ಛಲ ನರನರದಿ ಬಲ ಕುದಿಕುದಿದು ಹರಿಯಲಿ ಕೃತಿಯಲಿ!
ಅಳಿದ ಜೀವನ ಉಳಿದ ಭಾವಕ್ರಿಯೆಯು
ಕೊನರಲಿ ಸ್ಮೃತಿಯಲಿ !

—ಬಿ. ಎ. ಸನದಿ

# ಜಯಮಾಲೆ

ಸುರುಚಿರಂ ನರುಗಂಪು ! ಬಗೆಗಮೃತವರ್ಷಮನೆ
ಕರೆವ ನರುಗಂಪಿದರ ಪರ್ಬುಗೆಗೆ ದೆಸೆಗಳೆಡೆ-
ನೆರೆಯುತ್ತೆ ! ಇದೊ ಇದೋ ವಿಶ್ವಮಂ ಕಿರುನಗೆಯ
ತಂಬೆಳಕಿನಿಂದೆ
ಪೊರೆದು ನಿಂತಿರ್ದಪಳ್ ವೀರವತ್ಸಲೆ ಮನೋ-
ಹರಮೂರ್ತಿ ಜಯಲಕ್ಷ್ಮಿ ಪುಣ್ಯನಿಲಯನ ಕೊರಲೊ-
ಳಿರಿಸಲ್ಕೆ ದಿವ್ಯಸುಮಮಾಲೆಯಂ ಪಿಡಿದು ! ಕಂಪೆಸಿತಿತ್ತೈ
ಜಯಮಾಲೆಯಾ ! ॥ ೧ ॥

ಇವನಡಿಗೆ ಬಾಗಿಮೆಲೆ ಧೈರ್ಯಮೇರುವಿನಡಿಗೆ
ಭುವನೈಕಸತ್ಯಸಂಗರನಡಿಗೆ ದೀನಬಂ-
ಧುವನಡಿಗೆ ಶಾಂತಿಸಾಗರನಡಿಗೆ ಋಜುವೃತ್ತಿಯಡಿಗೆ
ನಿರ್ದ್ವಂದ್ವನಡಿಗೆ
ಅವಿಚಲವ್ರತಧುರಂಧರನಡಿಗೆ ವಿಶ್ವಬಾಂ-
ಧವನಡಿಗೆ ಜಿತಸಂಗನಡಿಗೆ ನಿರ್ಮಮನಡಿಗೆ
ಸುವಿಶಾಲಮತಿಯಡಿಗೆ ನಿತ್ಯಸತ್ವಸ್ಥನಡಿಗೀಸ್ಥಿ
-ತಪ್ರಜ್ಞನಡಿಗೆ ॥ ೨ ॥

ಇವನ ಪುಣ್ಯಪ್ರಭಾವದಿನಲ್ತೆ ಎಮಗೆ ಸಂ-
ಭವಿಸಿದುದು ವಿಜಯಲಕ್ಷ್ಮಿಯ ಪುಣ್ಯದರ್ಶನೋ-
ತ್ಸವಮಿಂದು ! ದಾಸ್ಯವಿಷಶುಷ್ಕಾಂಗಿಗಿವನಲ್ತೆ
ಸಂಜೀವನಂ ಜನನಿಗೆ?

ಇವನ ತಪದಿಂದಖಿಲ ವಿಶ್ವಕಲ್ಲವೆ ಶಾಂತಿ ?
ಇವನಿಂದವುುತ್ಸಾಹವೈ ಭರತಸಂತಾನ-
ಕಿವನಿಂದೆ ಭಾಗ್ಯೋದಯಂ ! ನಿನ್ನ ಜಯಮಾಲೆಯೀಂ
ಕೃತಿಯೊ ನಿಜಯುಲಕ್ಷ್ಮೀ ! ॥ ೩ ॥

– ಸಾಲಿ ರಾಮಚಂದ್ರರಾಯರು

# ಬಹುರೂಪಿ

"ಇವರು ಯಾರು" ಎಂದು ಗಾಂಧಿಯವರ ಕುರಿತು ಬಗೆವರೆ
ಅವರು ಒಬ್ಬರಲ್ಲ, ಹಲವು ರೂಪಿನವರು ಕಾಣರೇ ?

ಕಾಟಕಾವುಧೇನುವಿರುವ ತವಸಿ ವರವಸಿಷ್ಠನು
ಕೋಟಿ ವಿಘ್ನಗಳಲಿ ಸತ್ಯಬಿಡದ ಹರಿಶ್ಚಂದ್ರನು ॥
ಘೋರಸಾಸದಿಂದ ಸೃಷ್ಟಿಗೈವ ವಿಶ್ವಾಮಿತ್ರನು
ಘೋರಹಿಂಸೆ ಕರುಣೆಯಿಂದ ಮುರಿಯನಿಂತ ಬುದ್ಧನು ॥
ದನುಜಬಲವ ದೈವಶಕ್ತಿಯಿಂದ ಮುರಿವಕೃಷ್ಣನು
ಮನುಜಕುಲವ ಪ್ರೇಮದಿಂದ ಗೆಲಲುನಿಂತ ಕ್ರಿಸ್ತನು ॥
ತಂದೆಯಾಜ್ಞೆಯಂತೆ ಮನಸಿನೊಲವ ತೊರೆದ ರಾಮನು
ಒಂದುಘೋರ ಆಣೆಯಿಟ್ಟುಕೊಂಡು ನಡೆದ ಭೀಷ್ಮನು ॥
ದಿವ್ಯನೆರವಿನಿಂದ ಗುರಿಯ ಹೊಡೆವ ಇಂದ್ರತನುಜನು
ಭವ್ಯಕರ್ಮಯೋಗನಿರತ ದಿವ್ಯತೇಜ ಸೂರ್ಯನು ॥
ಮರಣಹಿಂಸೆಯಲ್ಲು ಭಕ್ತಿಬಿಡದ ಪ್ರಹ್ಲಾದನು
ಪರಮಸೇವೆಗಸ್ಥಿಬಿಡುವ ಆ ದಧೀಚಿವರ್ಯನು ॥
ಎಲ್ಲೆಯಲ್ಲಿ ದೈವರೂಪಕಂಡ ರಾಮಕೃಷ್ಣನು
ಹೊಲೆಯರನ್ನು ಹರಿಯಜನರಗೈದ ಪುಣ್ಯವಂಶನು ॥
ಬಗೆದರಷ್ಟುಬಗೆಯಭಾವ ಬೆಳಗುವಾ ಮಹಾತ್ಮನು
ಜಗದಜನ್ಮ ಸುಟ್ಟ ಯುಗದ ಜೀವನಾ ದ್ವಿಜಾತ್ಮನು ॥

—ಸಿಂಪಿ ಲಿಂಗಣ್ಣ

# ಪ್ರಾರ್ಥನೆ

ಹೊನ್ನ ವಿಷದ ಹಲ್ಲು ಧರಿಸಿ
ಇನ್ನು ಹೆಡೆಯನೆತ್ತಿ ಮೆರೆದ
ಘನ್ನ ಧನಿಕನಾಗಗಳನು ಹಿಡಿದು ಮಂತ್ರಿಸಿ ।
ತನ್ನ ಕಾರ್ಯಕೊಲಿದು ಬಂದು
ಬನ್ನ ಬವಣೆಗಿಳಿಸಿ ಅವರ
ಧನ್ಯರಾಗಿ ಮಾಡಿದಂಥ ಕುಶಲಿಗಾರುಡೀ ॥ ೧ ॥

ಕಲಿತ ವಿದ್ಯೆಯಿಂದ ಮುದಿಸಿ
ಕಲಿತುಕೊಳದೆ ಉಳಿದ ಜನರ
ಕುಲವೆ ಬೇರೆ ತಮ್ಮದೆಂದು ತಿಳಿದ ಜನರನು ।
ಒಲಿಸಿ ತನ್ನ ದೀಕ್ಷೆಯಿತ್ತು
ಬಿಳಿಯ ವೇಷದುಡಿಗೆ ಕೊಟ್ಟು
ಕೊಳೆಯ ಕಳೆವ ಬಿರುದುತೊಟ್ಟ ದೀನಬಂಧುವು ॥ ೨ ॥

ಉಚ್ಚಧರ್ಮದವರ ಹೆಮ್ಮೆ
ಬಿಚ್ಚುಗೊಳಿಸಿ ಅವರ ಮನಸು
ಅಚ್ಚಸೇವೆಗೆಳಸಿ ಪೂರ್ವಕರ್ಮ ಕೆಡಿಸಲು ।
ಸ್ವೇಚ್ಛೆಮಾರ್ಗವನ್ನು ತೋರಿ
ಹೆಚ್ಚು ಬಾಳು ಬೆಳಗುವಂತೆ
ಕೃಚ್ಛ್ರವ್ರತವ ಹಳಿವ ಜೋಳಿಯ ಕಳೆವತಪಸಿಯೆ ॥ ೩ ॥

ರಾಜಕಾರ್ಯ ಪುತ್ರಿ ಆ ಸ-
ಮಾಜ ಧರ್ಮಗಳಲಿ ತಪಗೆ
ಮೂಜಗದೊಳು ಯಾರುಸರಿಯು"ಎನುವ ಬಿಳಿಂಪರ |
ತೇಜವಡಗುವಂತೆ ದಿವ್ಯ-
ರಾಜಧರ್ಮ ಮೆರೆಸಿ ವರ ಸ-
ಮಾಜ ಮಾರ್ಗ ತೊಳಗಿಸಿರುವ ಪ್ರಾಜ್ಞ ಜೀವಿಯು || ೪ ||

-ಸಿಂಪಿ ಲಿಂಗಣ್ಣ

# ಯೋಗಿ ತ್ಯಾಗಿ ಹಾ ವಿರಾಗಿ !

ನೀಲಗಗನ ನಗುವ ಚಂದ್ರ
ಹಾಲ ಹೊಳೆಯು ಧವಲ ಗಿರಿಯು
ಓಂಕಾರ ವಿಶ್ವಗೀತೆ
ಒಟ್ಟುಗೂಡಿ ಬಟ್ಟೆಗಿಳಿದ
ವಿಶ್ವಮೋಹನನ ರೂಪ ವಿಶ್ವಲೀನವಾಯಿತೆ !

ಜಗದ ಚಿಕ್ಕಿ ತಿಕ್ಕಿಮುಕ್ಕಿ
ಕಪ್ಪುಕೊಳ್ಳದಿಂದ ಬಿಕ್ಕಿ
ನಮೋ ಚಂದ್ರ ಶಾಂತಿ ಸಾಂದ್ರ
ತನುವು ಹೊತ್ತಿ ಒಡಲ ಸುತ್ತಿ
ಸಾಯುತಿಹೆವು ಕಾಯಿಯೆಂದು ಆರ ಬೆನ್ನ ಬೀಳಲಿನ್ನು ?

ನಗುತ ಕಾಲನೇಮಿ ತಿರುಪಿ
ಮುಗಿಲ ಹೊಯ್ದು ನಭವ ನೆಯ್ದು
ಜಗಕೆ ಹೊದಿಸಿ ನಗುವ ಹರಸಿ
ಬಗೆಯನುಣಿಸಿ ಭಾಗ್ಯವಿತ್ತ
ಯೋಗಿ ತ್ಯಾಗಿ ಹಾ ವಿರಾಗಿ ! ಜಗವು ಬಾಯ
ಬಿಡುತಿದೆ

ಗಾಂಧಿ ಗ್ರಂಥಮಾಲೆ

ಅರಗು ಹೆಗಲು ಉರಿ ಸವಾರಿ
ಕರಗದಂತೆ ಪೊರಗುತೋರಿ
ಧರೆಯು ಕಣ್ಣ ಚಿರಗು ಬಣ್ಣ
ಅರಳಿಸುತ್ತ ಭಾರತಿಯು
ಸಿರಿಯ ಬಿತ್ತಿ ಹಿರಿಮೆ ಹಡೆದ ಭಾಗ್ಯದಾತನೆ !

ಒಂದೆ ಹಾಸು ಒಂದೆ ಹೊಚ್ಚು
ಚಂದ್ರ ಸೂರ್ಯರೊಂದೆ ಅಚ್ಚು
ಹೆಚ್ಚುಕಡಿಮೆಯೆಲ್ಲ ಕಿಚ್ಚು
ಒಂದೆಮಾಳಿ ದೇವಲೀಲೆ
ಎಂದು ನೊಂದು ಬೆಂದ ತಂದೆ ಒಂದು ಹೂವು ಬಾಡಲು

ಜಪಕೆ ತಪಕೆ ವಿಪಿನ ತೊರೆದು
ಜಗದ ಜೀವದೊಡನೆ ಬೆರೆದು
ತನುವ ಹೂಡಿ ಜನವಹೊತ್ತು
ಘನವ ಕೂಡಿ ಮೆರೆಯುತಿರಲು
ಅಣುವು ಘನವ ನುಂಗಿತಯ್ಯೊ ಮನವು ಶೂನ್ಯವು !

ಸಮತೆ ಸುಮತಿ ಶಾಂತಿಯರಳ್ದ
ಸುಮವು ಸುಟ್ಟುಹೋಯಿತೆ !
ಹಿಮದ ಗಿರಿಗೆ ಉರಿಯು ಹತ್ತಿ
ತಮದ ನಾಲಿಗೆಯನೆತ್ತಿ
ನೆಲವ ನೆಕ್ಕಿ ನಭವ ಮುಕ್ಕೆ ಕರುಣ ಮರಣ
ಹೊಂದಿತೇ !

ಕೊಂದ ಪಾಪಿಯೊಂದು ಕೇಳಿ
ರೋಮ ಭೀಮ ಕಾಳಿಗ
ಒಂದೆ ನಿಮಿಷ ಓಂಕಾರ
ಶಾಂತಿ ಶಾಂತಿ ಝೇಂಕಾರ
ಕೊಂದನೆನ್ನ ತಂದೆಯುಯ್ಯೊ ಕೊಲ್ಲಬೇಡಿರೆನುತಿದೆ

ಕೊಂದ ಕೈಯು ಕೊಳ್ಳಲಿಯ್ಯೊ
ಇಂದು ಸಭವ ಚಂದ್ರ[illegible]ರಿಯು !
ಶಾಂತಿ ಸಮತೆ ಸತ್ಯಮೂರ್ತಿ
ಪ್ರಾಂತ ಕೀರ್ತಿ ಚಿರಸ್ಫೂರ್ತಿ
ಪಂಚಭೂತವಳಿದರೇನೆ ಮಿಂಚುತಿಹುದು
ಮೋಹನಾತ

—ಆರ್. ಸಿ. ಹಿರೇಮಠ

---

# ಪ್ರಥಮ ಚರಣಗಳ ಅಕಾರಾದಿ........